ಈ ಈಶೋಪನಿಷತ್ತು ವೇದದ ಅತ್ಯಂತ ಸಾರಭಾಗಗಳ ಲ್ಲೊಂದು. . .

ಈ ಉಪನಿಷತ್ತಿನ ಮೇಲೆ ಶಂಕರಾಚಾರ್ಯರೂ ಆನಂದ ತೀರ್ಥರೂ ಶ್ರೀವತ್ಸಾಂಕ ಕೂರನಾರಾಯಣರೂ ಭಾಷ್ಯ ಗಳನ್ನೂ; ಉವಟಭಟ್ಟ, ಬ್ರಹ್ಮಾನಂದ, ಶಂಕರಾನಂದ, ರಾಮಚಂದ್ರಪಂಡಿತ, ಆನಂದಭಟ್ಟ, ಅನಂತಾಚಾರ್ಯ —ಇವರುಗಳು ವ್ಯಾಖ್ಯಾನ ವಿವರಣೆಗಳನ್ನೂ ಬರೆದಿದ್ದಾರೆ. ಈ ಪುಸ್ತಕದಲ್ಲಿಯ ಕನ್ನಡ ಅನುವಾದದಲ್ಲಿ ಆ ಎಲ್ಲ ಟೀಕೆ ಟಿಪ್ಪಣಿಗಳನ್ನೂ ಉಚಿತಕಂಡಂತೆ ಉಪಯೋಗಿಸಿಕೊಂಡಿದೆ.

ಜಗತ್ತು ಕೇವಲ ಶ್ರೇಷ್ಠವೇನೂ ಅಲ್ಲ: ಆದರೆ ಅದು ಕೇವಲ ತುಚ್ಛವೂ ಅಲ್ಲ. ನಮ್ಮ ಆತ್ಮೋದ್ಧಾರಕ್ಕಾಗಿ ಅದರಿಂದ ದೊರೆಯಬೇಕಾದ ಸಹಾಯವೂ ಒಂದಷ್ಟಿದೆ. ಜಗತ್ತು ಈಶ್ವರನದೆಂಬ ದೃಷ್ಟಿಯಿಂದ ನಾವು ಅದನ್ನು ಕಂಡರೆ ಆಗ ಅದು ನಮಗೆ ಬಂಧನವಾಗಿರುವುದು ಹೋಗಿ ತಾರಕವಾದೀತು—ಎಂಬಿದು ಈಶಾವಾಸ್ಯದ ಉಪದೇಶ.

ಈ ಉಪನಿಷತ್ತಿನ ಉಪದೇಶವು ವೇದಮತಸ್ಥರಿಗೆ ಮಾತ್ರವೇ ಅಲ್ಲದೆ ಎಲ್ಲ ದೇಶಗಳ ಎಲ್ಲ ಮತಗಳ ಜನರಿಗೂ ಗ್ರಾಹ್ಯವಾಗತಕ್ಕದ್ದೆಂದು ಪ್ರಸ್ತುತದ ಅನುವಾದಕಾರನ ನಂಬಿಕೆ. ಆದಕಾರಣ ಅವನು . . . ವಿಸ್ತಾರವಾದ ದೃಷ್ಟಿ ಯಿಂದ ಅರ್ಥಯೋಜನೆ ಮಾಡಿದ್ದಾನೆ.

**ಬೆಲೆ :**

ಸಾದಾಪ್ರತಿ ರೂ. 2–00
ಕ್ಯಾಲಿಕೊಪ್ರತಿ ರೂ. 5–00

ಕನ್ನಡ ಕಾವ್ಯಮಾಲೆ

# ಈಶೋಪನಿಷತ್ತು

ಕನ್ನಡ ಛಾಯಾಪದ್ಯ
ಟಿಪ್ಪಣಿ ತಾತ್ಪರ್ಯ ಸಂಗ್ರಹಗಳೊಡನೆ

ಡಿ.ವಿ.ಜಿ.



ಕಾವ್ಯಾಲಯ :: ಪ್ರಕಾಶಕರು
ಮೈಸೂರು



ಮಹಾಮಹೋಪಾಧ್ಯಾಯ, ವಿದ್ಯಾನಿಧಿ,
ವಿದ್ಯಾವಾಚಸ್ಪತಿ, ನ್ಯಾಯಪಂಚಾನನ.
ಬ್ರಹ್ಮಶ್ರೀ ಹಾನಗಲ್ ವಿರೂಪಾಕ್ಷಶಾಸ್ತ್ರಿಗಳವರು
(ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ
ಶ್ರೀ ವಿದ್ಯಾಭಿನವ ವಾಲುಕೇಶ್ವರ ಭಾರತೀ ಸ್ವಾಮಿಗಳವರು)

ಜನನ : ೧೮೭೩ ಸಿದ್ಧಿ : ೧೯೩೬

ತಪಸ್ವಿಗಳಾಗಿ ತೇಜಸ್ವಿಗಳಾಗಿ

ಲೋಕದಲ್ಲಿ ವೇದಶಾಸ್ತ್ರಪ್ರಭೆಯನ್ನು ಹರಡಿದವರಾಗಿ

ಮಹಾಮಹೋಪಾಧ್ಯಾಯರೆಂದೂ ವಿದ್ಯಾನಿಧಿಯೆಂದೂ

ವಿಖ್ಯಾತರಾಗಿದ್ದ

**ಬ್ರಹ್ಮಶ್ರೀ ಹಾನಗಲ್ ವಿರೂಪಾಕ್ಷಶಾಸ್ತ್ರಿಗಳವರು**

ಕೃಪಾದೃಷ್ಟಿಯಿಂದ ನನಗೆ

ವೇದಾಂತಶಾಸ್ತ್ರದ ದಿಗ್ದರ್ಶನ ಮಾಡಿಸಿದ

ಪರಮಾನುಗ್ರಹದ ಸಂಸ್ಮರಣಸಂಜ್ಞೆಯಾಗಿ

ಇದು ಸಮರ್ಪಿತ

“ ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ”—ತೈತ್ತಿರೀಯ

# ಅರಿಕೆ

## ಎರಡನೆಯ ಮುದ್ರಣ

ಈ ಪುಸ್ತಕದ ಮೊದಲನೆಯ ಪ್ರಕಟನೆ ೧೯೫೩ ರಲ್ಲಿ ಆದದ್ದು. ಅಲ್ಲಿಂದ ಈವರೆಗಿನ ಹದಿನಾರು ವರ್ಷಗಳಲ್ಲಿ ಪುಸ್ತಕದ ಪ್ರತಿಗಳಿಗಾಗಿ ನೂರಾರು ಅಪೇಕ್ಷೆಗಳು ಬಂದಿವೆ. ಆದರೆ ವಾಚಕರ ಸೌಕರ್ಯಕ್ಕಾಗಿ ಇಲ್ಲಲ್ಲಿ ಗ್ರಂಥವನ್ನು ತಿದ್ದಬೇಕಾದೀತೇನೋ ಎಂಬ ಶಂಕೆಯಿಂದ ನಾನು ಇಷ್ಟುಕಾಲ ಕಾದಿದ್ದದ್ದಾಯಿತು.

ದೇಹದ ದೌರ್ಬಲ್ಯವೂ ಕಣ್ಣಿನ ಮಾಂದ್ಯವೂ ಈಚೆಗೆ ಸೇರಿಕೊಂಡದ್ದರಿಂದ ಪುನರ್ವಿಮರ್ಶನ ಕಾರ್ಯಕ್ಕೆ ಮತ್ತಷ್ಟು ತಡವಾಯಿತು.

ಏತನ್ಮಧ್ಯೆ ಈ ಗ್ರಂಥವನ್ನು ನೋಡಬೇಕೆಂಬ ಅಪೇಕ್ಷೆಯುಳ್ಳ ಮಹಾಜನರ ಬೇಡಿಕೆಗಳು ಬರುತ್ತಲೇ ಇವೆ. ಹೀಗಿರಲಾಗಿ ಇನ್ನು ಕಾಲವಿಳಂಬ ಮಾಡತಕ್ಕದ್ದಲ್ಲವೆಂದು ಗಟ್ಟಿಮನಸ್ಸು ಮಾಡಿ ಗ್ರಂಥವನ್ನು ಬಹುಮಟ್ಟಿಗೆ ಇದ್ದದ್ದಿದ್ದಂತೆ ಈಗ ಪುನರ್ಮುದ್ರಣ ಮಾಡಿದೆ.

ಹಿಂದಿನ ಇಂಥ ಗ್ರಂಥಪ್ರಕಟನ ಸಂದರ್ಭಗಳಲ್ಲಿ ಜಿಜ್ಞಾಸುಗಳಾದ ವಿದ್ವಜ್ಜನರಿಂದ ಶೋಧನೆ ವಿವರಣೆಗಳಿಗಾಗಿ ಸೂಚನೆಗಳನ್ನು ಬೇಡಿದ್ದೆ. ನನಗೆ ಬೇಕಾಗಿದ್ದ ಸೂಚನೆಗಳು ಮುಖ್ಯವಾಗಿ ತತ್ತ್ವಪ್ರತಿಪಾದನೆಗೆ ಸಂಬಂಧಪಟ್ಟವು; ವ್ಯಾಕರಣಾದಿ ವಿಷಯುಗಳಿಗೆ ಸಂಬಂಧಪಟ್ಟವಲ್ಲ. ಭಾಷಾಪ್ರಯೋಗ ವಿಷಯದಲ್ಲಿ ನಾನು ಯಾವುದೋ ಒಂದು ದಾರಿಯನ್ನು ಇಂಥ ಕಾರ್ಯಕ್ಕಾಗಿ ಗೊತ್ತುಮಾಡಿಕೊಂಡಿದ್ದೇನೆ. ಪುರಂದರಾದಿ ಹರಿದಾಸರ ಮತ್ತು ಶಿವಶರಣರ ಪ್ರಯೋಗಗಳನ್ನೂ ನಮ್ಮ ಷಟ್ಪದೀಕಾರರ ಪ್ರಯೋಗಗಳನ್ನೂ ನಾನು ಅಂಗೀಕರಿಸಿಕೊಂಡಿದ್ದೇನೆ. ಅದಕ್ಕಿಂತ ಹೆಚ್ಚಾಗಿ, ಕೆಲವು ಹೊಸ ಮಾರ್ಪಾಟುಗಳು ನಮ್ಮ ಜನದ ಇಂದಿನ ರೂಢಿಗೆ ಅವಶ್ಯವೆಂದು ಭಾವಿಸಿದ್ದೇನೆ. ಈ ಮಾತು ನನ್ನ ಲೇಖನಶೈಲಿಗೆ ಸಂಬಂಧಪಟ್ಟದ್ದು. ತತ್ತ್ವ ಪ್ರತಿಪಾದನೆಯ ಸಂಬಂಧದಲ್ಲಿಯಾದರೋ ನನಗೆ ಈಗ ತಿದ್ದಲವಶ್ಯವೆಂಬ ಸೂಚನೆ ಎಲ್ಲಿಂದಲೂ ಬಂದಿಲ್ಲವೆಂಬುದನ್ನು ಹೇಳಿಕೊಳ್ಳಲು ಮನಸ್ಸಿಗೆ ಸಮಾಧಾನವಾಗಿದೆ.

ಇನ್ನು ನಾನು ಹೇಳಲು ಉಳಿದಿರುವ ಮಾತು ಕೃತಜ್ಞತೆಯದು. ಆ ಮಾತನ್ನು ನಾನು ಉಪಚಾರಕ್ಕಾಗಲಿ ಲೋಕರೂಢಿಗಾಗಲಿ ಹೇಳುತ್ತಿಲ್ಲ; ನನ್ನ

ಅಂತರಂಗದ ಒಂದು ಭಾವವನ್ನು ವ್ಯಕ್ತಪಡಿಸದೆ ಬಿಟ್ಟಲ್ಲಿ ಅದು ಅಲ್ಲಿ ನಿಂತು ಭಾರಕಟ್ಟೀತು. ಆ ಭಾರನಿವಾರಣೆಗಾಗಿ ಆಡುವ ಮಾತು ಕೃತಜ್ಞತೆಯದು. ನನ್ನ ಮಾನ್ಯ ಮಿತ್ರರು ಶ್ರೀ ಚಿದಂಬರಂ, ಚಿ|| ರಾಮಸ್ವಾಮಿ ಇವರಿಬ್ಬರೂ ಈ ಗ್ರಂಥದ ಕಾರ್ಯದಲ್ಲಿ ಶ್ರಮಪಟ್ಟು ಸಹಾಯ ಕೊಟ್ಟಿದ್ದಾರೆಂದು ಸಾಮಾನ್ಯವಾಗಿ ನನ್ನ ಈಚೀಚಿನ ಗ್ರಂಥಗಳನ್ನು ನೋಡಿರುವವರೆಲ್ಲ ತಾವೇ ಊಹಿಸಿಯಾರು. ಈ ಸ್ನೇಹಿತರಿಬ್ಬರಿಗೂ ಪರಮೇಶ್ವರನ ಅನುಗ್ರಹ ಸಂತತವಾಗಿರಲಿ.

ಸರ್ವಂ ಶಿವಂ

ಬೆಂಗಳೂರು
ಅಕ್ಟೋಬರ್ ೧೯೭೦

ಡಿ. ವಿ. ಜಿ.

# ಅರಿಕೆ

## ಮೊದಲನೆಯ ಮುದ್ರಣ

ಈ ಪುಸ್ತಕದ ಮುದ್ರಾಕ್ಷರ ಯೋಜನೆಯೂ ಕೊನೆಯ ಎಂಟು ಪುಟಗಳ ಹೊರತು ಮಿಕ್ಕೆಲ್ಲದರ ಮುದ್ರಣವೂ ಮುಗಿದಿದ್ದಾಗ ಶ್ರೀ ಆಚಾರ್ಯ ವಿನೋಬ ಭಾವೆಯರ "ಈಶಾವಾಸ್ಯ ವೃತ್ತಿ" ಎಂಬ ಗ್ರಂಥವು ಅಪ್ರಯತ್ನವಾಗಿ, ಅಕಸ್ಮಾತ್ತಾಗಿ, ನನ್ನ ದೃಷ್ಟಿಪಥದೊಳಕ್ಕೆ ಬಂತು. ಶ್ರೀ ವಿನೋಬಾ ಅವರು ಸಂಸ್ಕೃತ ವಿದ್ವಾಂಸರೆಂದೂ ಉಪನಿಷತ್ಸಾಧಕರೆಂದೂ ಪ್ರಸಿದ್ಧರಾಗಿದ್ದಾರೆ. ಅವರ ನೀತಿಸಮುನ್ನತಿಯನ್ನು ನಾನು ಪೂಜಿಸತಕ್ಕವನು. ಆದಕಾರಣ ಅವರ ಗ್ರಂಥವನ್ನು ನಾನು ಕುತೂಹಲದಿಂದ ನೋಡಿದೆ. ಅವರ ಅರ್ಥನಿರ್ಣಯಮಾರ್ಗವು ಅನೇಕ ಅಂಶಗಳಲ್ಲಿ ನಾನು ಅನುಸರಿಸಿರುವ ಮಾರ್ಗದಿಂದ ಬೇರೆಯಾಗಿದೆ.

ಸಾಂಪ್ರದಾಯಿಕವಾಗಿ ಬಂದಿರುವ ಅರ್ಥವನ್ನು ಬಿಡಲು ಅದಕ್ಕೆ ಪ್ರಬಲ ಕಾರಣಗಳಿದ್ದ ಹೊರತು ಹಾಗೆ ಮಾಡತಕ್ಕದ್ದಲ್ಲವೆಂದು ನಾನು ತಿಳಿದುಕೊಂಡಿದ್ದೇನೆ. ಸಾವಿರಾರು ವರ್ಷಗಳ ಒಂದು ಗ್ರಂಥದ ಮೇಲೆ ನೂರಾರು ವರ್ಷಗಳ ಹಿಂದಿನ ವ್ಯಾಖ್ಯಾನಕರ್ತರು ಉಲ್ಲೇಖಿಸಿ ಇಷ್ಟು ದೀರ್ಘಕಾಲ ಜನಪರಂಪರೆ ಅಂಗೀಕರಿಸಿರುವ ಅರ್ಥವಿವರಣೆಯನ್ನು ಈಗ ನಾವು ತ್ಯಜಿಸಬೇಕಾದರೆ ಅದಕ್ಕೆ ಬಹು ದೊಡ್ಡ ಕಾರಣಗಳಿರಬೇಕಲ್ಲವೆ? ಎಷ್ಟೋ ಕಡೆ ಸಾಂಪ್ರದಾಯಿಕವಾದ

ಅರ್ಥವು ನಮ್ಮ ಮೇಲ್ಮೇಲಣ ಕ್ಷಿಪ್ರ ದೃಷ್ಟಿಗೆ ಸಮಂಜಸವೆನಿಸದೆ ಹೋಗಬಹುದು; ಅಂಥ ಕಡೆ ನಾವು ತಾಳ್ಮೆಯಿಂದ ಆಳ ಹೊಕ್ಕು ವಿಚಾರ ಮಾಡಿದರೆ ಆಗ ಅಲ್ಲಿ ಆ ಅಸಾಮಂಜಸ್ಯಕ್ಕೆ ಬದಲಾಗಿ ಒಂದು ಸಮಂಜಸ ಸ್ವಾರಸ್ಯವೇ ಸ್ಫುರಿಸಬಹುದು. ಬಹುಮುಖವಾಗಿಯೂ ತಳಮುಟ್ಟುವಂತೆಯೂ ಹುಡುಕಿ ನೋಡದೆ ಸಂಪ್ರದಾಯವನ್ನು ಬಿಡಲಾಗದು.

ಈಶೋಪನಿಷತ್ತಿನ ೯–೧೧ ನೆಯ ಮಂತ್ರಗಳಲ್ಲಿ (ಪುಟ ೨೭-೨೮, ೪೭-೪೭) ಬರುವ (i) "ವಿದ್ಯೆ", "ಅವಿದ್ಯೆ' ಎಂಬ ಪದಗಳ, ಮತ್ತು (ii) ೧೨–೧೪ ನೆಯ ಮಂತ್ರಗಳ (ಪುಟ ೩೦-೩೩, ೪೮-೪೯) "ಸಂಭೂತಿ", "ಅಸಂಭೂತಿ" ಎಂಬ ಪದಗಳ ಅರ್ಥವನ್ನು ಕುರಿತು ಪೂರ್ವಕಾಲದಿಂದ ಅಭಿಪ್ರಾಯಭೇದಗಳು ಬಂದಿವೆ. ಈ ಅರ್ಥಭೇದಕ್ಕೆ ಆಯಾ ವ್ಯಾಖ್ಯಾತರು (i) ಕರ್ಮ-ಜ್ಞಾನಗಳ ಮತ್ತು (ii) ಲೌಕಿಕ-ವೈರಾಗ್ಯಗಳ ಪರಸ್ಪರ ಸಂಬಂಧವನ್ನು ಕುರಿತು ಇಟ್ಟುಕೊಂಡಿದ್ದ ಭಾವನಾಭೇದಗಳೇ ಕಾರಣ. ಆ ಎರಡು ಜೋಡಿಗಳಲ್ಲಿ ಪ್ರತಿಯೊಂದು ಜೋಡಿಯ ಎರಡಂಶಗಳೂ ಅನ್ಯೋನ್ಯ ವಿರೋಧಿಗಳಲ್ಲ, ಸಹಕಾರಿಗಳು; (i) ಕರ್ಮವು ಜ್ಞಾನಕ್ಕೆ ಮೆಟ್ಟಿಲು, ಜ್ಞಾನವು ಕರ್ಮಕ್ಕೆ ಫಲ; ಹಾಗೆಯೇ (ii) ಲೌಕಿಕವು ವೈರಾಗ್ಯಕ್ಕೆ ಪೂರ್ವಸಿದ್ಧತೆ; ವೈರಾಗ್ಯವು ಲೌಕಿಕದ ಪುಷ್ಪಸೌರಭ. ಹೀಗೆ ಆ ಜೋಡಿಗಳ ಉಭಯಾಂಶಗಳೂ ವಾಸ್ತವವಾಗಿ ಬೇರೆಬೇರೆಯಲ್ಲ, ಅವು ಕೂಡಿಕೊಂಡೇ ಇರುತ್ತವೆ—ಒಂದೇ ಕೋಲಿನ ಎರಡು ಕೊನೆಗಳಂತೆ. ಪ್ರವೃತ್ತಿ ನಿವೃತ್ತಿಗಳೆರಡೂ ಒಂದೇ ಧರ್ಮದ ಎರಡು ಪಕ್ಷಗಳು: ಹೀಗೆಂಬುದು ಈ ಉಪನಿಷತ್ತಿನ ತಾತ್ಪರ್ಯವೆಂದು ನಾನು ನಂಬಿಕೊಂಡಿದ್ದೇನೆ.

ಲೋಕಸಂಪರ್ಕವು ಜೀವಕ್ಕೆ ಸಂಕಟ ಕಷ್ಟಗಳನ್ನು ತಂದು ಜೀವವನ್ನು ಪರೀಕ್ಷೆಗೆ ಗುರಿಪಡಿಸಿ ಶೋಧನೆ ಮಾಡಿಸುತ್ತದೆ. ಹಾಗೆಯೇ ಸುಖಸಂತೋಷಗಳು ಕೂಡ ಜೀವದಲ್ಲಿಯ ಲೋಕಮೈತ್ರಿ, ಜೀವನೋತ್ಸಾಹ ಮೊದಲಾದ ಗುಣಗಳನ್ನು ಉತ್ತೇಜನಪಡಿಸಿ ಸಂಸ್ಕಾರಕಾರಕಗಳಾಗುತ್ತವೆ. ಹೀಗೆ ಲೋಕಜೀವನದಲ್ಲಿ ಮಿಳಿತವಾಗುವುದು ತತ್ತ್ವಜ್ಞಾನಕ್ಕೆ ಅವಶ್ಯವಾದ ಒಂದು ಮನಸ್ಸಂಸ್ಕಾರ.

"ಅಸಂಭೂತಿ", "ಅಸಂಭವ", "ವಿನಾಶ"—ಈ ಮೂರು ಪದಗಳೂ ಸಮಾನಾರ್ಥಕಗಳಾಗಿ ಪ್ರಯೋಗಿಸಲ್ಪಟ್ಟಿವೆ (ಮಂತ್ರ ೧೨–೧೪). ಆ ಅರ್ಥವು ನಿರ್ದೇಶಿಸುವ ವಸ್ತು ಯಾವುದು? ಆ ವಸ್ತುವು "ಸಂಭೂತಿ", "ಸಂಭವ"—ಎಂಬುದರಿಂದ ಸೂಚಿತವಾದ ವಸ್ತುವಿಗಿಂತ ಲಕ್ಷಣದಲ್ಲಿ ಬೇರೆಯಾದದ್ದು; ಅದು ಜಗತ್ತು. ಅದರ ವಿಷಯದಲ್ಲಿ ಉಪನಿಷತ್ತು ಇನ್ನೂ

ಎರಡು ಮಾತುಗಳನ್ನು ಸೂಚಿಸಿದೆ: (೧) ಆ ವಸ್ತುವನ್ನು ಜನ ಉಪಾಸಿಸುತ್ತಿದ್ದಾರೆ; (೨) ಅದರಿಂದ ಒಳ್ಳೆಯದಾಗುವುದು ಸಾಧ್ಯವಿದೆ. ಅಂಥಾ ವಸ್ತು ಯಾವುದು? ಸ್ವತಂತ್ರವಾದ ಅಸ್ತಿತ್ವವಿಲ್ಲದ್ದು, ವಾಸ್ತವವಾಗಿರದೆ ತೋರಿಕೆಯ ಮಟ್ಟಿಗಿರುವುದು, ನಾಶವಾಗತಕ್ಕದ್ದು; ಜನಕ್ಕೆ ಬೇಕೆನಿಸಿರುವುದು; ಕಿಂಚಿತ್ತು ಉಪಕಾರ ಮಾಡಲೂ ಬಲ್ಲದ್ದು—ಈ ಎಲ್ಲ ಲಕ್ಷಣಗಳೂ ಜಗತ್ತಿನಲ್ಲಿವೆ. ಜಗತ್ತು ಕೇವಲ ಶ್ರೇಷ್ಠವೇನೂ ಅಲ್ಲ: ಆದರೆ ಅದು ಕೇವಲ ತುಚ್ಛವೂ ಅಲ್ಲ. ನಮ್ಮ ಆತ್ಮೋದ್ಧಾರಕ್ಕಾಗಿ ಅದರಿಂದ ದೊರೆಯಬೇಕಾದ ಸಹಾಯವೂ ಒಂದಷ್ಟಿದೆ. ಜಗತ್ತು ಈಶ್ವರನದೆಂಬ ದೃಷ್ಟಿಯಿಂದ ನಾವು ಅದನ್ನು ಕಂಡರೆ ಆಗ ಅದು ನಮಗೆ ಬಂಧನವಾಗಿರುವುದು ಹೋಗಿ ತಾರಕವಾದೀತು—ಎಂಬಿದು ಈಶಾವಾಸ್ಯದ ಉಪದೇಶ.*

---

* ಈಶಾವಾಸ್ಯೋಪನಿಷತ್ತಿನ ಸಾರವನ್ನು ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು "ಮಂತ್ರೋಪದೇಶ" ಎಂಬ ಹೆಸರಿನ ಕಥೆಯಲ್ಲಿ ಹೃದಯಂಗಮವಾದ ರೀತಿಯಲ್ಲಿ ನಿರೂಪಿಸಿದ್ದಾರೆ. ಉಪದೇಶಕ್ಕೆ ಸಂದರ್ಭ, ಕಾರಣ ಮೊದಲಾದ ಸನ್ನಿವೇಶ ಸಂಬಂಧಗಳನ್ನು ಚೆನ್ನಾಗಿ ನಿರ್ಮಿಸಿದ್ದಾರೆ. (ಮಾಸ್ತಿಯವರ ಪುಸ್ತಕಗಳು, ಕತೆಗಳು—ಸಂಪುಟ ೨)

# ವಿಷಯ ಸೂಚಿಕೆ

## ಪೀಠಿಕಾ ಭಾಗ



## ಗ್ರಂಥ ಭಾಗ



## ಚಿತ್ರ

# ಪೀಠಿಕಾ ಭಾಗ

## ಗ್ರಂಥಾಧಿಕಾರ

"ಉಪನಿಷತ್ತು" ಎಂದರೆ ಏನೆಂಬುದನ್ನು ಇಲ್ಲಿ ಮುಂದೆ ವಿವರಿಸಲಾಗುತ್ತದೆ. ಸದ್ಯಕ್ಕೆ ಅದು ಜೀವನತತ್ತ್ವವನ್ನು ತಿಳಿಸಿಕೊಡುವ ಗ್ರಂಥ ಎಂದು ಇಟ್ಟುಕೊಳ್ಳಬಹುದು. ಅದರ ವಿಷಯ ಹೀಗೆ ಗಹನವಾದದ್ದು. ಅದು ಸುಲಭವಾಗಬೇಕಾದರೆ ನಾವು ಮೊದಲು ಕೆಲವು ಶಿಕ್ಷಣ ಸಾಧನೆಗಳಿಂದ ಮನಸ್ಸನ್ನು ಸಿದ್ಧಪಡಿಸಿಕೊಂಡಿರಬೇಕು. ಅಂಥ ಸಾಧನೆಗಳಲ್ಲಿ "ಪುರುಷಸೂಕ್ತ" ವ್ಯಾಸಂಗ ಮುಖ್ಯವಾದದ್ದು.

"ಪುರುಷಸೂಕ್ತ"ವೂ ಉಪನಿಷತ್ತುಗಳೂ ವೇದವೆಂಬ ಮಹಾಗ್ರಂಥದ ಭಾಗಗಳು. ಪುರುಷಸೂಕ್ತವು ಉಪನಿಷತ್ತುಗಳಿಗೆ ಪೀಠಿಕಾಪ್ರಾಯವಾದ ಗ್ರಂಥ. ಆದದ್ದರಿಂದ ಆ ಸೂಕ್ತವನ್ನು ಕಲಿತು, ಮನನಮಾಡಿ, ಅದರ ಭಾವನೆಗಳ ಪರಿಚಯವನ್ನು ಸಂಪಾದಿಸಿರುವವರಿಗೆ ಉಪನಿಷತ್ತಿನ ಭಾಷೆಯೂ ಭಾವನೆಗಳೂ ಸುಲಭಗ್ರಾಹ್ಯಗಳಾಗುತ್ತವೆ.

ವೇದದ ಮುಖ್ಯ ವಿಷಯ ಜೀವ-ದೈವತತ್ತ್ವ. ಆ ಸೂಕ್ಷ್ಮ ತತ್ತ್ವವನ್ನು ಗ್ರಹಿಸುವ ಸಾಮರ್ಥ್ಯ ನಮಗುಂಟಾಗಲು ನಾವು ಎಂಥೆಂಥ ಗುಣಶೀಲ ಸಂಸ್ಕಾರಗಳನ್ನು ಮಾಡಿಕೊಂಡಿರಬೇಕೆಂಬುದನ್ನು (ಈ ತತ್ತ್ವಗ್ರಂಥಮಾಲೆಯ ಮೊದಲ ಪುಸ್ತಕವಾದ) ನಮ್ಮ "ಪುರುಷಸೂಕ್ತ" ಗ್ರಂಥದ ಪೀಠಿಕಾ ಭಾಗದಲ್ಲಿ ಸಂಗ್ರಹವಾಗಿ ತೋರಿಸಿದ್ದಾಗಿದೆ. ವಾಚಕರು ಆ ಪೀಠಿಕೆಯನ್ನು ಪೂರ್ತಿಯಾಗಿ ನೋಡಬೇಕೆಂದು ನಮ್ಮ ಬೇಡಿಕೆ. ಅದರ ಕೆಲವು ಅಂಶಗಳನ್ನು ಈ ಕೆಳಗೆ ಉದ್ಧರಿಸಿಕೊಟ್ಟಿದೆ.

ತತ್ತ್ವಜ್ಞಾನದ ಸಂಪಾದನೆಯು ಬರಿಯ ನಿಘಂಟು ವ್ಯಾಕರಣಗಳ ಪಾಂಡಿತ್ಯದಿಂದಾಗಲಿ ತರ್ಕಚಮತ್ಕಾರದಿಂದಾಗಲಿ ಆಗತಕ್ಕದ್ದಲ್ಲ. ಏಕೆಂದರೆ ತತ್ತ್ವದ ಮುಖ್ಯವಿಷಯವಾದ ಜೀವದ ಮೂಲಸ್ವರೂಪವಾಗಿರುವ ಆತ್ಮವಸ್ತುವೆಂಬುದು ಭಾಷೆಗಿಂತ ಸೂಕ್ಷ್ಮವಾದದ್ದು ಮತ್ತು ಬುದ್ಧಿಗೆ ಮೇಲ್ಪಟ್ಟದ್ದು. ಆ ಆತ್ಮವನ್ನು ಕಾಣುವ ಶಕ್ತಿಯು ಮನುಷ್ಯನ ಅಂತರಂಗದಲ್ಲಿ ಮನಸ್ಸಿಗಿಂತಲೂ ಬುದ್ಧಿಗಿಂತಲೂ ಸೂಕ್ಷ್ಮವಾಗಿ, ಆತ್ಮದಲ್ಲಿಯೇ ಗೂಢವಾಗಿ ಅಡಗಿಕೊಂಡಿರುತ್ತದೆ. ಅದೇ ಸಹಜಬೋಧೆ; ಅದೇ ಅಂತಃಪ್ರಜ್ಞೆ; ಅದೇ ಪ್ರತ್ಯಗ್ದೃಷ್ಟಿ. ಅದಿದ್ದರೆಯೇ ಆಧ್ಯಾತ್ಮಿಕ ಪ್ರವೃತ್ತಿ. ಮನಸ್ಸು ಬುದ್ಧಿ ಮೊದಲಾದ ಎಲ್ಲ ಅಂತಃಕರಣಗಳೂ ನಿರ್ಮಲವಾಗಿ ಏಕೀಭವಿಸಿ ಜಗದ್ರಹಸ್ಯದ ಕಡೆ ತಿರುಗಿದಾಗ ಆ ಆಧ್ಯಾತ್ಮಿಕಶಕ್ತಿಯು ಪ್ರಕಾಶಕ್ಕೆ ಬರುತ್ತದೆ.

ತತ್ತ್ವಾಭ್ಯಾಸಂಗಕ್ಕೆ ಬೇಕಾದ ಗುಣ ಯೋಗ್ಯತೆಗಳಲ್ಲಿ ನಾಲ್ಕನ್ನು ಮುಖ್ಯವೆಂದು ಬಲ್ಲವರು ಹೇಳಿರುತ್ತಾರೆ (೧) ಈ ಲೋಕದಲ್ಲಿ ಶಾಶ್ವತವಾದದ್ದು ಯಾವುದು, ನಾಶವಾಗಿಹೋಗುವುದು ಯಾವುದು—ಎಂಬ ವಿವೇಚನೆ ಇದೇ ನಿತ್ಯಾನಿತ್ಯವಿವೇಕ. (೨) ತಾನು, ತನ್ನದು, ತನ್ನ ಲಾಭ, ತನ್ನ ಹೆಸರು, ತನ್ನ ಸೌಖ್ಯ—ಎಂಬೀತೆರದ ಸ್ವಾರ್ಥಗಳನ್ನು ಹದ್ದಿನಲ್ಲಿರಿಸುವುದು. ಇದೇ ಭೋಗವಿರಾಗ. (೩) ತನಗೆ ಬಂದ ಕಷ್ಟನಿಷ್ಠುರಗಳನ್ನು ಸೈರಿಸಿ, ಕೋಪತಾಪಗಳನ್ನೂ ಮದಮತ್ಸರಗಳನ್ನೂ ತಡೆದು, ಮನಸ್ಸನ್ನು ಸಮಾಧಾನಸ್ಥಿತಿಯಲ್ಲಿರಿಸಿಕೊಳ್ಳುವ ಅಭ್ಯಾಸ. ಇದೇ ಶಮದಮಾದಿಸಂಯಮ (೪) ವೇದಶಾಸ್ತ್ರಶ್ರವಣವನ್ನು ವಿಶ್ವಾಸದಿಂದಾರಂಭಿಸುವ ಬುದ್ಧಿವೃತ್ತಿ. ಇದೇ ಮುಮುಕ್ಷುತ್ವ. ಮುಮುಕ್ಷುತ್ವವೆಂದರೆ ಮೋಕ್ಷಾಪೇಕ್ಷೆ ಅದೇ ತತ್ತ್ವಕುತೂಹಲ ಮನುಷ್ಯನ ಅಂತರಂಗದಲ್ಲಿ ಗೂಢವಾಗಿರುವ ಆಧ್ಯಾತ್ಮಿಕ ವಾಸನೆಯು ಪರಿಪಕ್ವವಾದಾಗ ಮೋಕ್ಷಾಕಾಂಕ್ಷೆ. ಆ ಆಕಾಂಕ್ಷೆ ಹುಟ್ಟಿದ ಮೇಲೆ ಮೊದಲು ಅಪೇಕ್ಷ್ಯವಾದದ್ದು ವೇದಶಾಸ್ತ್ರಗಳಲ್ಲಿ ನಂಬಿಕೆ. ಅದೇ ಶ್ರದ್ಧೆ. ಸಾಮಾನ್ಯವಾಗಿ ಒಬ್ಬ ಮನುಷ್ಯನಿಗೆ ತನ್ನ ತಾಯಿ ಬಡಿಸಿದ ಊಟದಲ್ಲಿ ಎಂಥ ನಂಬಿಕೆ ಇರುತ್ತದೆಯೋ, ಅಥವಾ ತನ್ನ ವೈದ್ಯನ ಔಷಧದಲ್ಲಿ ಎಷ್ಟು ನೆಚ್ಚಿಕೆ ಇರುತ್ತದೆಯೋ, ಆ ತೆರದ ವಿಶ್ವಾಸದೃಷ್ಟಿಯಿಲ್ಲದವನ ಮನಸ್ಸಿಗೆ ಉಪದೇಶವಾಕ್ಯವು ಸರಿಯಾಗಿ ಅರ್ಥವಾಗಲಾರದು ಮೊದಲು ನಂಬಿಕೆಯಿಂದ ಊಟಮಾಡಿ, ಅಥವಾ ಔಷಧ ಕುಡಿದು, ಆಮೇಲಿನ ಅನುಭವದಿಂದ ಅದರ ಗುಣವನ್ನು ಕಂಡುಕೊಳ್ಳುತ್ತೇವೆ. ಅಂಥಾ ಉತ್ತರೋತ್ತರ-ಪುನರ್ವಿಚಾರ-ನಿಷೇಧಕವಾಗದ ಆಪ್ತವಾಕ್ಯವಿಶ್ವಾಸವು ತತ್ತ್ವಜಿಜ್ಞಾಸೆಯಲ್ಲಿಯೂ ಅವಶ್ಯ. ಈ ನಾಲ್ಕು ಬಗೆಯ ಪೂರ್ವಸಿದ್ಧತೆಯನ್ನು ಸಾಧನಚತುಷ್ಟಯವೆನ್ನುತ್ತಾರೆ.

ಯಾರ ಸಹಜದಲ್ಲಿ ಆಧ್ಯಾತ್ಮಕುತೂಹಲವಿಲ್ಲವೋ, ಯಾರು ತಮ್ಮ ವ್ಯವಹಾರದಲ್ಲಿ ನಿಯಮನಿಷ್ಠೆಗಳನ್ನಿಟ್ಟುಕೊಂಡಿಲ್ಲವೋ, ಯಾರು ತಾತ್ತ್ವಿಕದೃಷ್ಟಿಯನ್ನು ಸಂತತಾಭ್ಯಾಸದಿಂದ ಸೂಕ್ಷ್ಮಪಡಿಸಿಕೊಂಡಿಲ್ಲವೋ ಅಂಥವರಿಗೆ ಇಂಥ ಗ್ರಂಥವು ನಿಷ್ಪ್ರಯೋಜಕ. ಅಷ್ಟೇ ಅಲ್ಲ, ಅಂಥವರು ಈ ವಿಷಯದ ಗಂಭೀರತೆಯನ್ನೂ ಪೂಜ್ಯತೆಯನ್ನೂ ಕಾಣಲಾರದೆ, ಗ್ರಂಥವಾಕ್ಯಕ್ಕೆ ಅಪಾರ್ಥವನ್ನು ಕಲ್ಪಿಸಿ, ಲೋಕದ ಸುಸ್ಥಿತಿಗೆ ಹಾನಿತಂದರೂ ತರಬಹುದು

ಮಂತ್ರದ ಮಹಿಮೆ ಅದರ ಅಕ್ಷರದಲ್ಲಲ್ಲ; ನಮ್ಮ ಮನನದಲ್ಲಿ ದೇವರ ವರ ನಮ್ಮ ಭಕ್ತಿಗೆ ತಕ್ಕಂತೆ. ದೇವರಲ್ಲಿರುವುದನ್ನೆಲ್ಲ ಅವನು ಕೊಟ್ಟರೆ ನಾವು ಹೊತ್ತುಕೊಳ್ಳಲಾರೆವು. ನಮ್ಮ ಯೋಗ್ಯತೆಯಂತೆ ಅವನ ಅನುಗ್ರಹ. ಆದದ್ದರಿಂದ ನಮ್ಮ ಉದ್ಧಾರಕ್ಕೆ ಬೇಕಾದ ಮೊದಲನೆಯ ಸಾಧನ ನಮ್ಮ ಶ್ರದ್ಧೆ ಪ್ರಯತ್ನಗಳೇ ಮಂತ್ರಾಕ್ಷರಗಳು ನಿಮಿತ್ತಮಾತ್ರ. ಅಕ್ಕಿಯನ್ನು ಅನ್ನವಾಗಿಸುವುದು ಪಾತ್ರೆಯಲ್ಲ, ಬೆಂಕಿಯುರಿ ಮಂತ್ರದಿಂದ ತತ್ತ್ವದರ್ಶನವನ್ನು ಉಂಟಾಗಿಸುವುದು ಮನಸ್ಸಿನ ಕಾವು ಅದೇ ಶ್ರದ್ಧೆ, ಅದೇ ತಪಸ್ಸು.

# ಅವತರಣಿಕೆ

ಈ ಈಶೋಪನಿಷತ್ತು ವೇದದ ಅತ್ಯಂತ ಸಾರಭಾಗಗಳಲ್ಲೊಂದು.

ವೇದದ ವಿಷಯವು ಜಗದ್ರಹಸ್ಯ. ಆ ರಹಸ್ಯದಲ್ಲಿ ಮೂರು ಅಂಶಗಳು ಬೆರೆತುಕೊಂಡಿರುತ್ತವೆ; (೧) ಜಗತ್ತನ್ನು ಅನುಭವಿಸುವ ಜೀವ; (೨) ಜೀವ ಅನುಭವಿಸುವ ಜಗತ್ತು; (೩) ಆ ಎರಡಕ್ಕೂ ಈ ಅನುಭವಸಂಬಂಧವನ್ನು ಕಲ್ಪಿಸುವ ಒಂದು ಮೂರನೆಯ ತತ್ತ್ವ; ಅದೇ ಈಶ್ವರ. ಈ ತ್ರಿಕೂಟದ ಸ್ವರೂಪವನ್ನು ತಿಳಿಸಿಕೊಡುವುದು ವೇದದ ಉದ್ದೇಶ.

ವೇದದಲ್ಲಿ ಎಷ್ಟೋ ಲೌಕಿಕ ವಿಷಯಗಳೂ ಇರುತ್ತವೆ. ಭೂಗೋಳ ಖಗೋಳಗಳ ವಿಚಾರ, ಮಳೆ ಸಿಡಿಲು ಕಿಚ್ಚು ಗಾಳಿಗಳ ವಿಚಾರ, ಗೋ ಧನ ಧಾನ್ಯಗಳ ವಿಚಾರ, ಮನುಷ್ಯನ ಸಮಾಜಬಾಂಧವ್ಯಗಳ ವಿಚಾರ, ರಾಷ್ಟ್ರ ವಿಚಾರ, ಸಂಪತ್ತಾಪತ್ತುಗಳ ವಿಚಾರ—ಇಂಥ ಎಷ್ಟೋ ಲೌಕಿಕ ವಿಚಾರಗಳು ವೇದದಲ್ಲಿ ಬರುತ್ತವೆ. ಆದರೆ ಅವೆಲ್ಲ ಪ್ರಾಸಂಗಿಕವಾದವು, ಮುಖ್ಯವಾದವಲ್ಲ. ವೇದದ ಮುಖ್ಯ ವಿಷಯ ಮೇಲೆ ಹೇಳಿದ ತ್ರಿಕೂಟರಹಸ್ಯ; ಆ ರಹಸ್ಯದ ದರ್ಶನಕ್ಕೆ ತಕ್ಕ ಉಪಾಯವನ್ನು ತೋರಿಸಿಕೊಡಬಲ್ಲದ್ದು ವೇದ.

"ಪ್ರತ್ಯಕ್ಷೇಣಾನುಮಿತ್ಯಾ ವಾ
ಯಸ್ತೂಪಾಯೋ ನ ಬುಧ್ಯತೇ |
ಏನಂ ವಿದಂತಿ ವೇದೇನ
ತಸ್ಮಾದ್ವೇದಸ್ಯ ವೇದತಾ ||"

ಯಾವ ಮಹಾತತ್ತ್ವವನ್ನು ಕಣ್ಣು ಕಿವಿ ಮೊದಲಾದ ಇಂದ್ರಿಯಗಳಿಂದ ಪ್ರತ್ಯಕ್ಷವಾಗಿ ಕಾಣಲಾಗುವುದಿಲ್ಲವೋ, ಮತ್ತು ತರ್ಕಯುಕ್ತಿಗಳಿಂದಲೂ ಪ್ರಮಾಣಪಡಿಸಲಾಗುವುದಿಲ್ಲವೋ ಅಂಥ ಲೋಕಾತೀತ ತತ್ತ್ವವನ್ನು ತಿಳಿಸಿಕೊಡಬಲ್ಲದ್ದು ವೇದ. ವೇದದ ವೇದತ್ವವಿರುವುದು ಆ ಅತೀಂದ್ರಿಯ ವಸ್ತುಬೋಧನೆಯಲ್ಲಿ.

ಆ ತ್ರಿಕೂಟರಹಸ್ಯವನ್ನು ನಾವು ತಿಳಿದುಕೊಳ್ಳಬೇಕಾದದ್ದೇತಕ್ಕೆ?—ಎಂಬ ಪ್ರಶ್ನೆಯನ್ನು ಬಹುಶಃ ಯಾರೂ ಕೇಳಲಾರರು; ಏಕೆಂದರೆ ಅದಕ್ಕುತ್ತರ ಎಲ್ಲರ ಮನಸ್ಸಿಗೂ ತಾನೇ ಹೊಳೆದೀತು. ಜೀವ, ಜಗತ್ತು, ಈಶ್ವರ—ಈ ಮೂರು ತತ್ತ್ವಗಳ ಸ್ವರೂಪಗಳನ್ನೂ ಅನ್ಯೋನ್ಯ ಸಂಬಂಧಗಳನ್ನೂ ಚೆನ್ನಾಗಿ

ತಿಳಿದುಕೊಂಡಲ್ಲದೆ ನಾವು ಜೀವನವನ್ನು ಸಾರ್ಥಕವಾಗುವಂತೆ ನಡಸುವ ರೀತಿ ಯಾವುದು ಎಂಬುದು ನಮಗೆ ನಿಶ್ಚಿತವಾಗಿ ತಿಳಿದುಬರಲಾರದು. ಜೀವನದ ಉದ್ದೇಶವೇನಾಗಿರಬೇಕು? ಅದಕ್ಕೆ ಸಾಧನಗಳು ಯಾವಯಾವುವು?—ಇಂಥ ಪ್ರಶ್ನೆಗಳಿಗೆ ಸರಿಯಾದ ಉತ್ತರ ದೊರೆಯಬೇಕಾದರೆ ಜೀವಸ್ವರೂಪದ ಅರಿವೂ, ಅದಕ್ಕಿರುವ ಪ್ರಪಂಚ ಸಂಬಂಧಗಳ ಅರಿವೂ, ಜೀವ ಪ್ರಪಂಚಗಳನ್ನಾಳುತ್ತ ಅವನ್ನು ಮೀರಿರುವ ಮಹಾಶಕ್ತಿಯ ಅರಿವೂ ನಮಗೆ ಚೆನ್ನಾಗಿ ಉಂಟಾಗಿರಬೇಕು. ಈ ಮೂರು ಅರಿವುಗಳನ್ನು ವೇದವು ನಮಗೆ ದೊರಕಿಸುತ್ತದೆಂಬುದೂ, ವೇದವನ್ನು ಬಿಟ್ಟರೆ ಆ ಅರಿವಿಗೆ ಬೇರೆ ದಾರಿ ಯಾವುದೂ ಇಲ್ಲವೆಂಬುದೂ ವೇದದ ಪ್ರಾಶಸ್ತ್ಯ.

ವೇದವಾಙ್ಮಯವು ವಿಷಯವಿಶೇಷದ ದೃಷ್ಟಿಯಿಂದ ಸ್ಥೂಲವಾಗಿ ಮೂರು ಭಾಗಗಳುಳ್ಳದ್ದಾಗಿದೆ.

(೧) **ಸಂಹಿತೆ**—ಮಹರ್ಷಿಗಳೆಂದು ನಾವು ಕರೆಯುವ ಪ್ರಾಚೀನತಮರು ತಮಗೆ ಬಾಹ್ಯಜಗತ್ತಿನಲ್ಲಿ ಕಾಣಬಂದ ಪ್ರಕೃತಿಯ ಅದ್ಭುತಗಳನ್ನು ನೋಡಿ ಬೆರಗಾಗಿ, ಆ ಅದ್ಭುತಶಕ್ತಿಗಳನ್ನು ದೇವತೆಗಳೆಂದು ಭಾವಿಸಿ, ಅವರನ್ನು ಕೊಂಡಾಡಿರುವ ಭಾಗವೇ ಸಂಹಿತೆ. ಅದರಲ್ಲಿ ಇಂದ್ರ, ವರುಣ, ಅಗ್ನಿ, ವಾಯು, ಯಮ, ಸೂರ್ಯ, ಸೋಮ ಮೊದಲಾದ ನಾನಾ ದೇವತೆಗಳನ್ನು ಕುರಿತ ಸ್ತೋತ್ರಗಳೂ ಪ್ರಶಂಸೆಗಳೂ ಇರುತ್ತವೆ.

(೨) **ಬ್ರಾಹ್ಮಣ**—ಮೇಲೆ ಹೇಳಿದ ನಾನಾ ದೇವತೆಗಳನ್ನು ಒಲಿಸಿಕೊಳ್ಳಲು ಮಾಡಬೇಕಾದ ಪೂಜೆ ಪುರಸ್ಕಾರಗಳ ವಿಧಾನಗಳನ್ನು ಕುರಿತ ಭಾಗವೇ ಬ್ರಾಹ್ಮಣ. ಇದರಲ್ಲಿ ಯಜ್ಞಯಾಗಾದಿ ದೇವತಾಕರ್ಮಗಳಿಗೆ ಬೇಕಾದ ವೇದಿಕೆಗಳು, ಹೋಮಕುಂಡಗಳು, ಆಜ್ಯ ಹವಿಸ್ಸುಗಳು, ಪಶು ಚರುಗಳು, ಈ ನಾನಾ ದ್ರವ್ಯೋಪಕರಣಗಳ ರೂಪರಚನೆಗಳ ವರ್ಣನೆಗಳು, ಅವುಗಳನ್ನು ಸಿದ್ಧಪಡಿಸುವ ವಿಧಾನದಲ್ಲಿ ವಿನಿಯೋಗವಾಗಬೇಕಾದ ಮಂತ್ರಗಳು, ಅವುಗಳ ಉಚ್ಚಾರಣೆ, ಅರ್ಥವಿವರಣೆ—ಇವೆಲ್ಲ ಸೇರಿವೆ.

(೩) **ಉಪನಿಷತ್ತು**—ಆ ನಾನಾ ದೇವತೆಗಳ ಬೆಂಗಡೆಯಲ್ಲಿ, ಅವಕ್ಕೆ ಶಕ್ತಿಪ್ರದವೂ ನಿಯಾಮಕವೂ ಆಗಿ, ಒಂದು ಮಹಾ ದೈವವಿರುತ್ತದೆಂದು ಸಿದ್ಧಾಂತಿಸಿ, ಆ ಮಹಾ ಸತ್ತ್ವವೇ ಜಗದೇಕಮೂಲವೆಂದೂ, ಅದು ಸರ್ವಾಂತರ್ಯಾಮಿಯೆಂದೂ ಶಾಶ್ವತವೆಂದೂ ಉದ್ಘೋಷಿಸಿ, ಆ ಪರತತ್ತ್ವಕ್ಕೂ ಮನುಷ್ಯನ ಜೀವಕ್ಕೂ ಇರುವ ಸಂಬಂಧವನ್ನು ತಿಳಿಸಿಕೊಡುವ

ವೇದಭಾಗವೇ ಉಪನಿಷತ್ತು. ಇದೇ ವೇದಾಂತ,—ವೇದದ ಕೊನೆ,—ವೇದದ ಕಡೆಯ ಮಾತು,—ವೇದದ ಫಲಿತಾರ್ಥ. ದ್ವೈತ ಅದ್ವೈತ ವಿಶಿಷ್ಟಾದ್ವೈತ ಮೊದಲಾದ ಮತಭೇದಗಳು ಹುಟ್ಟಿರುವುದು ಈ ಉಪನಿಷತ್ತುಗಳಿಗೆ ಅರ್ಥ ಹೇಳುವುದರಲ್ಲಿ.

ವೇದವಾಙ್ಮಯವನ್ನು ವಿಷಯದೃಷ್ಟಿಯಿಂದ ಕರ್ಮಕಾಂಡ ಜ್ಞಾನಕಾಂಡ ಗಳೆಂದು ಎರಡಾಗಿ ವಿಭಾಗಿಸುವುದೂ ಉಂಟು. ಮೇಲೆ ಹೇಳಿರುವ ಸಂಹಿತೆ ಬ್ರಾಹ್ಮಣಗಳೆಂಬೆರಡು ವೇದಭಾಗಗಳೂ ಕರ್ಮಕಾಂಡ; ಉಪನಿಷತ್ತು ಜ್ಞಾನಕಾಂಡ.

ಬ್ರಾಹ್ಮಣವೆಂಬ ವೇದಭಾಗಕ್ಕೂ ಉಪನಿಷತ್ತಿಗೂ ನಡುವೆ ಎರಡಕ್ಕೂ ಸೇತುವೆಯಂತೆ ಆರಣ್ಯಕವೆಂಬ ವೇದಭಾಗವಿರುತ್ತದೆ. ಇದನ್ನು ಉಪನಿಷತ್ತಿನ ಪೀಠಿಕಾಭಾಗವೆಂದು ಗಣಿಸಬಹುದು.

ಸಂಹಿತೆ ಬ್ರಾಹ್ಮಣಗಳು ಮಾಡಿಸುವ ಯಜ್ಞಯಾಗಾದಿ ಕರ್ಮಗಳು ಮನುಷ್ಯನಿಗೆ ಇಹಲೋಕದಲ್ಲಿಯೂ ಸ್ವರ್ಗಾದಿ ಲೋಕಾಂತರಗಳಲ್ಲಿಯೂ ಸುಖಸಂಪತ್ತುಗಳನ್ನು ದೊರಕಿಸತಕ್ಕವು. ಅವುಗಳ ಫಲಕ್ಕೆ ಮಿತಿಯುಂಟು. ಆದರೂ ಮನುಷ್ಯನು ಆ ಫಲವನ್ನು ಬಯಸುತ್ತಾನೆ. ಅಂಥ ಬಯಕೆಗಳೆಲ್ಲ ಗೃಹಸ್ಥಜೀವನದಲ್ಲಿ ತೀರಿ, ಆಮೇಲೆ ಅವನು ಅಲೌಕಿಕವೂ ಅಪರಿಮಿತವೂ ಆದ ಶಾಂತಿರೂಪದ ಸುಖವನ್ನು ಬಯಸುವ ಕಾಲವೊಂದು ಬರುತ್ತದೆ. ಆ ಶಾಂತಿ ಮಯ ಸುಖವೇ ಮೋಕ್ಷವೆಂಬುದು. ಅದು ಪ್ರಪಂಚಭಾರದಿಂದ ಬಿಡುಗಡೆ. ಈ ಮೋಕ್ಷವೆಂಬ ಪರಮೋದ್ದೇಶದ ಕಡೆಗೆ ಮನಸ್ಸು ತಿರುಗಿದಂತೆಲ್ಲ ಅವನು ಕರ್ಮಕಾಂಡದ ಸಂಬಂಧವನ್ನು ಬಿಟ್ಟು ಜ್ಞಾನಕಾಂಡವನ್ನು ಹಿಡಿಯ ಹೊರಡುತ್ತಾನೆ. ಈ ಸ್ಥಿತಿಯೇ ವಾನಪ್ರಸ್ಥವೆಂಬುದು. ಮನೆಬಿಟ್ಟು ಕಾಡಿಗೆ ಬರುವ ಸ್ಥಿತಿ ಅದು. ಹಾಗೆ ಬಂದಮೇಲೆ ಅರಣ್ಯದಲ್ಲಿದ್ದುಕೊಂಡು ಧ್ಯಾನ ಮಾಡಬೇಕಾದ ವೇದಭಾಗವೇ ಆರಣ್ಯಕ. ಉಪನಿಷತ್ತುಗಳು ಬೋಧಿಸುವ ತತ್ತ್ವಾನುಸಂಧಾನಕ್ಕೆ ಮನುಷ್ಯನ ಮನಸ್ಸನ್ನು ಸಿದ್ಧಪಡಿಸುವ ವೇದಭಾಗ ಆರಣ್ಯಕ. ಅದು ಉಪನಿಷತ್ತಿಗೆ ಮಹಾದ್ವಾರಪ್ರಾಯವಾದದ್ದು.

ಈ ಮೇಲಿನ ವೇದವಿಭಜನೆ ಸಂಕೇತಮಾತ್ರದ್ದು. ಅದು ಸೂಕ್ಷ್ಮವಿಚಾರ ದ್ದಲ್ಲ, ಸ್ಥೂಲದೃಷ್ಟಿಯದು. ವಾಸ್ತವವಾಗಿ ವೇದದ ಒಂದು ಭಾಗಕ್ಕೂ ಇನ್ನೊಂದು ಭಾಗಕ್ಕೂ ನಡುವೆ ಗೋಡೆ ಕಂದಕಗಳೇನೂ ಇಲ್ಲ. ಎಲ್ಲ ಭಾಗ ಗಳೂ ಅನುಸ್ಯೂತವಾಗಿ, ಒಟ್ಟುಗೂಡಿಕೊಂಡೇ ಇರುತ್ತವೆ. ಉಪನಿಷತ್ತುಗಳ ತಾತ್ಪರ್ಯದ ಸೂಚನೆ ಸಂಹಿತೆ ಬ್ರಾಹ್ಮಣಗಳಲ್ಲಿ ಪದೇಪದೇ ಕಾಣಬರುತ್ತದೆ.

ಹಾಗೆಯೇ ಸಂಹಿತೆ ಬ್ರಾಹ್ಮಣಗಳ ಪ್ರಧಾನಾಂಶದ ಪ್ರಸ್ತಾವ ಉಪನಿಷತ್ತುಗಳಲ್ಲಿ ಅಪರೂಪವಲ್ಲ. ಕರ್ಮಕಾಂಡದಲ್ಲಿ ಅಂಕುರರೂಪದಲ್ಲಿ ಕಾಣಿಸುವ ತತ್ತ್ವವೇ ಜ್ಞಾನಕಾಂಡದಲ್ಲಿ ಶಾಖೋಪಶಾಖೆಗಳುಳ್ಳ ಮಹಾ ವೃಕ್ಷವಾಗಿದೆ. ಏಕೇಶ್ವರವಾದ, ಜೀವವಿವಿಧತಾವಾದ, ಜನ್ಮಾಂತರ ಲೋಕಾಂತರ ಪ್ರಾಪ್ತಿವಾದ, ಕರ್ಮಫಲವಾದ—ಇವೇ ಮೊದಲಾದ ಮತಗಳು ವೇದದ ಉಭಯಕಾಂಡಗಳಿಗೂ ಸಮಾನಾಂಶಗಳೇ.

ಹಾಗಿದ್ದರೂ ಮನುಷ್ಯನ ಜೀವನಧರ್ಮಕ್ಕೆ ಆಧಾರವಾಗಿರಬೇಕಾದ ಮೇಲೆ ಹೇಳಿದ ತ್ರಿಕೂಟರಹಸ್ಯವನ್ನು ಕುರಿತ ಸಿದ್ಧಾಂತವು ಉಪನಿಷತ್ತುಗಳಲ್ಲಿ ವಿಶೇಷವಾಗಿಯೂ ವಿಸ್ತಾರವಾಗಿಯೂ ಪ್ರತಿಪಾದಿತವಾಗಿರುವುದರಿಂದ ಉಪನಿಷತ್ತಿಗೆ ಲೋಕದ ಆದರಣೆ ಹೆಚ್ಚಾಗಿ ದೊರೆತಿದೆ. ಮನುಷ್ಯನು ಪ್ರಪಂಚವನ್ನು ಹೇಗೆ ಕಾಣಬೇಕು ; ತನ್ನ ಬಾಳಿಗೆ ಯಾವ ಗುರಿಯನ್ನಿಟ್ಟುಕೊಳ್ಳಬೇಕು ; ಆ ಗುರಿಯನ್ನು ಮುಟ್ಟಲು ಏನೇನು ಮಾಡಬೇಕು — ಈ ಪ್ರಶ್ನೆಗಳಿಗೆ ಉತ್ತರ ಬೇಕೆಂಬವರು ಉಪನಿಷತ್ತಿನಲ್ಲಿ ಸಹಾಯಕಾಣಬಲ್ಲರು.

ಉಪನಿಷತ್ತು ಶಾಸ್ತ್ರಪ್ರಬಂಧವಲ್ಲ, ಅದು ಶಾಸ್ತ್ರಪ್ರಬಂಧಗಳಿಗೆ ಮೂಲ ಸಾಮಗ್ರಿ ; ಚಿನ್ನದ ಗಟ್ಟಿಯಲ್ಲ, ಅದು ಚಿನ್ನದ ಅದುರುಕಲ್ಲಿನೊಡನೆ ಹುದುಗಿಕೊಂಡಿರುವ ಖನಿಜದ ತುಂಡು. ಶಾಸ್ತ್ರಗ್ರಂಥದಲ್ಲಿ ಕಾಣಬರುವ ಕ್ರಮವ್ಯವಸ್ಥೆಯೂ ಪ್ರಕರಣವಿಭಾಗವೂ ತರ್ಕಸರಣಿಯೂ ಇಲ್ಲಿ ಕಾಣಬಾರವು. ಪ್ರೌಢಪಾಠಶಾಲೆಯಲ್ಲಿ ಉಪಾಧ್ಯಾಯನು ವಿದ್ಯಾರ್ಥಿಗಳಿಗೆ ಉಪನ್ಯಾಸಕೊಡುವಾಗ ತನ್ನ ಜ್ಞಾಪಕಕ್ಕಾಗಿ ಮುಖ್ಯಮುಖ್ಯಗಳಾದ ಅಂಶಗಳನ್ನೂ ತಾನು ಉಪಯೋಗಿಸಬೇಕೆಂದಿರುವ ಪದಗಳನ್ನೂ ಉದಾಹರಣೆಗಳನ್ನೂ ಒಂದು ಕಾಗದದ ಮೇಲೆ ಗುರುತುಹಾಕಿಕೊಂಡು ಅದನ್ನು ಮುಂದೆ ಇರಿಸಿಕೊಂಡಿರುವುದುಂಟಷ್ಟೆ? ಅದರಲ್ಲಿ ಪಾಠದ ಎಷ್ಟೋ ಅಂಶಗಳು ಕಾಣಬರುವುದಿಲ್ಲ. ಆ ಅಂಶಗಳನ್ನು ಉಪಾಧ್ಯಾಯನು ಉಪನ್ಯಾಸಕಾಲದಲ್ಲಿ ಬಾಯಮಾತಿನಿಂದ ಹೇಳಬಹುದೆಂದು ಬರೆದಿಡದೆ ಬಿಟ್ಟಿರುತ್ತಾನೆ. ಉಪನಿಷತ್ತು ಬಹುಮಟ್ಟಿಗೆ ಅಂಥಾ ಟಿಪ್ಪಣಿ ಪತ್ರ ("ಕ್ಲ್ಯಾಸ್ ನೋಟ್ಸ್"). ಅದರ ವಿಷಯಪ್ರತಿಪಾದನೆಯ ಸರಪಣಿಯಲ್ಲಿ ಕೊಂಡಿಗಳು ಇಲ್ಲಲ್ಲಿ ಕಳಚಿಹೋಗಿರುವುದುಂಟು. ಆ ಕೊಂಡಿಗಳನ್ನು ನಮಗೆ ಎತ್ತಿಕೊಡುವವರು ಭಾಷ್ಯಕಾರರು.

ಟಿಪ್ಪಣಿಯಲ್ಲಿ ಪಾರಿಭಾಷಿಕ ಪದಗಳಿರುವುದುಂಟು. ಉದಾಹರಣೆ : ಈಶೋಪನಿಷತ್ತಿನಲ್ಲಿ "ಅವಿದ್ಯೆ, ವಿದ್ಯೆ" (ಮಂತ್ರ ೯), "ಸಂಭೂತಿ, ಅಸಂಭೂತಿ" (ಮಂತ್ರ ೧೨). ಇವುಗಳ ವಿವರಣೆಯೂ ಭಾಷ್ಯಕಾರರಿಂದ ಬರಬೇಕಾದದ್ದೇ.

ಒಳ್ಳೆಯ ಸಾಮರ್ಥ್ಯವುಳ್ಳ ಉಪನ್ಯಾಸಕನು ವಿದ್ಯಾರ್ಥಿಯ ಮನಸ್ಸನ್ನು ತಡೆದು ಹಿಡಿಯುವುದಕ್ಕಾಗಿ ಕೆಲವು ವಾಕ್ಯಾಲಂಕಾರಗಳನ್ನು ಉಪಯೋಗಿಸುವುದುಂಟು. ಉಪನಿಷತ್ತಿನಲ್ಲಿ ಅಂಥ ಶಬ್ದಚಮತ್ಕಾರಗಳೂ ಕಾಣಬರುತ್ತವೆ. ಇಗೋ ಇಲ್ಲೊಂದು ಆಪಾತವಿರೋಧ ("ಪ್ಯಾರಡಾಕ್ಸ್"):—

"ಅವಿದ್ಯಯಾ ಮೃತ್ಯುಂ ತೀರ್ತ್ವಾ"—ಮಂ. ೧೧
"ವಿನಾಶೇನ ಮೃತ್ಯುಂ ತೀರ್ತ್ವಾ"—ಮಂ. ೧೪.

ಇದೊಂದು ಸೂಚ್ಯಗ್ರಕ ("ಎಪಿಗ್ರಮ್"):—

"ತೇನ ತ್ಯಕ್ತೇನ ಭುಂಜೀಥಾಃ"—ಮಂ. ೧.

"ತತ್ರ ಕೋ ಮೋಹಃ ಕಃ ಶೋಕಃ
ಏಕತ್ವಮನುಪಶ್ಯತಃ"—ಮಂ. ೭

ಇಂಥ ಸಂದರ್ಭಗಳಲ್ಲಿ ಭಾಷ್ಯಕಾರರು ಕೊಡುವ ಸಹಾಯದ ಜೊತೆಗೆ ಬುಭುತ್ಸುವು ತನ್ನ ಊಹನಪ್ರತಿಭೆಯನ್ನು ಸೇರಿಗೂಡಿಸಿಕೊಳ್ಳಬೇಕು.

ಉಪನಿಷತ್ತು ಒಂದು ಕಡೆ ಕಾವ್ಯ, ಒಂದು ಕಡೆ ಶಾಸ್ತ್ರ. ಅದರಲ್ಲಿ ಉತ್ತಮಕಾವ್ಯದ ಧ್ವನಿ, ತರ್ಕದ ಲೆಕ್ಕಾಚಾರ—ಎರಡೂ ಕೂಡಿಕೊಂಡಿರುತ್ತವೆ. ಅದರ ಪದಗಳಲ್ಲಿ ನಿಘಂಟಿನ ಅರ್ಥಕ್ಕಿಂತ ನಿಘಂಟಿಗೆ ಸಿಕ್ಕದ ಭಾವಸೂಚನೆಗಳು ದೊಡ್ಡವು. ಆ ಅಂತರ್ಧ್ವನಿಗಳು ಒಂದು ನಿಯತಾಕಾರದ ಸರಪಣಿಯಲ್ಲಿ ಜೋಡಣೆಯಾಗಿರುತ್ತವೆ. ಆದದ್ದರಿಂದ ಉಪನಿಷತ್ಪಠನೆಗೆ (೧) ಕಾವ್ಯವ್ಯಾಸಂಗಿಯ ಊಹನ-ಕಲ್ಪನ-ಅನುಭಾವನ ಶಕ್ತಿಗಳೂ, (೨) ಶಾಸ್ತ್ರವ್ಯಾಸಂಗಿಯ ವಾಕ್ಯಶೋಧನ-ಕಾರ್ಯಕಾರಣಯೋಜನ-ಪೂರ್ವಾಪರ ವಿಮರ್ಶನ ಸಾಮರ್ಥ್ಯಗಳೂ ಅವಶ್ಯವಾಗುತ್ತವೆ.

ಕನ್ನಡದಲ್ಲಿ ಗ್ರಂಥಕಾಲಕ್ಷೇಪವೆಂದರೆ ಬರಿಯ ಕಥೆ ಕಾದಂಬರಿಗಳ ವ್ಯಾಸಂಗವೆಂದು ಈಗ ಬಹುಮಂದಿ ತಿಳಿದುಕೊಂಡಿರುವಂತಿದೆ. ಅಂಥವರು ಉಪನಿಷತ್ಪುಸ್ತಕವನ್ನು ಕೈಗೆ ತೆಗೆದುಕೊಳ್ಳುವುದಾದರೆ ಅವರಿಗಾಗಿ ಒಂದು ಮುನ್ನೆಚ್ಚರಿಕೆಯ ಮಾತನ್ನು ಹೇಳುವ ಸಾಹಸವನ್ನು ಮಾಡಬೇಕಾಗಿದೆ; ಅದನ್ನವರು ಕ್ಷಮಿಸಿ ಲಾಲಿಸಬೇಕು. ಕಥೆ ಕಾದಂಬರಿಗಳ ಅಭ್ಯಾಸ ಅತಿಯಾದರೆ,—ಅದು ಒಂದು ಮಿತಿಯನ್ನು ಮೀರಿದರೆ,—ತತ್ತ್ವಗ್ರಂಥದ ಓದಿಗೆ ಬೇಕಾದ ಹದವನ್ನು ಮನಸ್ಸು ಕಳೆದುಕೊಂಡೀತು. ಕಥೆ ಕಾದಂಬರಿಗಳನ್ನು ಬರೆಯುವವರು ಮಾತನ್ನು ತೂಕಮಾಡಿ ಆರಿಸಿ ಜೋಡಿಸಬೇಕಾದ ನಿರ್ಬಂಧ

ವಿಲ್ಲ. ಮಾತು ಕೊಂಚ ಹೆಚ್ಚುಕಡಮೆಯಾದರೂ ಅಲ್ಲಿ ಅರ್ಥಕ್ಕೇನೂ ಬಾಧೆಯಿಲ್ಲ. ಅಲ್ಲಿ ಮುಖ್ಯವಾದದ್ದು ಕಥಾಪ್ರವಾಹ. ತತ್ತ್ವಗ್ರಂಥವಾದರೋ ಮಾತಿನ ಹೆಚ್ಚುಕಡಮೆಗಳನ್ನು ಸಹಿಸಲಾರದು. ಇಲ್ಲಿ ಬುದ್ಧಿಯು ಗಣಿತಶಾಸ್ತ್ರದ ಕಟ್ಟುನಿಟ್ಟಿಗೆ ಸಿದ್ಧವಾಗಿರಬೇಕು. ಕಥಾಪ್ರಪಂಚದ ಸ್ವಾತಂತ್ರ್ಯ ಇಲ್ಲಿರದು. ಇಲ್ಲಿ ಬುದ್ಧಿಯು ಪೂರ್ವಾಪರ ಸೂಕ್ಷ್ಮಗಳನ್ನು ತಪ್ಪಿಲ್ಲದಂತೆ ಗ್ರಹಿಸಲು ಜಾಗರೂಕವಾಗಿರಬೇಕು.

ಕಥೆಯಲ್ಲಿ ಓದುಗನ ಸ್ವಪ್ರಯತ್ನ ಹೆಚ್ಚು ಬೇಕಿಲ್ಲ. ಸನ್ನಿವೇಶದ ಸ್ವಾರಸ್ಯವೇ ಅವನನ್ನು ಸೆಳೆದುಕೊಂಡುಹೋಗುತ್ತದೆ. ತತ್ತ್ವಗ್ರಂಥದಲ್ಲಿ ಹಾಗಿಲ್ಲ. ಇಲ್ಲಿ ಬುದ್ಧಿಯ ಶ್ರಮ ಹೆಚ್ಚು ಅವಶ್ಯ.

ಕಥೆಯಲ್ಲಿ ಬಿಡಿಮಾತು ಅಷ್ಟು ಮುಖ್ಯವಲ್ಲ. ಅಲ್ಲಿ ವಾಕ್ಯರಾಶಿಯ ಒಟ್ಟು ಧೋರಣೆ ಮುಖ್ಯ. ತತ್ತ್ವಜಿಜ್ಞಾಸೆಯಲ್ಲಿ ತಿರುಳಿರತಕ್ಕದ್ದು ಬಿಡಿಮಾತಿನಲ್ಲಿ. ಮಾತಿನ ಅಂತರ್ಭಾವ ಕೈತಪ್ಪಿಹೋದರೆ ವಾಕ್ಯದ ಸಾರಾಂಶ ಸರಿಯಾಗಿ ದೊರೆಯದು.

ಆದದ್ದರಿಂದ ಈ ಗ್ರಂಥವು ವಾಚಕರಿಂದ ಹೆಚ್ಚು ಅವಧಾನವನ್ನು,—ಹೆಚ್ಚಿನ ಬುದ್ಧಿಪರಿಶ್ರಮವನ್ನು,—ಹೆಚ್ಚಾದ ವಿಚಾರಜಾಗರೂಕತೆಯನ್ನು ಅಪೇಕ್ಷಿಸುತ್ತದೆ. ವಾಚಕರು ಮಾತುಮಾತನ್ನೂ ಚೆನ್ನಾಗಿ ಗಮನಿಸಿ ನೋಡಿ, ಅದರ ಅಂತರ್ಭಾವಗಳನ್ನು ಸ್ವಪ್ರತಿಭಾಪ್ರಸಾರದಿಂದ ಕಂಡು ಜೋಡಿಸಿಕೊಳ್ಳಬೇಕು.

## ಉಪನಿಷದ್ವಿಚಾರ

ಉಪನಿಷತ್ತುಗಳು ೧೦೮ ಪ್ರಸಿದ್ಧವಾದವು. ಅವುಗಳಲ್ಲಿ ಹತ್ತು ಪರಮ ಪ್ರಮಾಣಗಳೆಂದು ಗಣ್ಯವಾಗಿ, ತ್ರಿಮತಾಚಾರ್ಯರುಗಳ ಭಾಷ್ಯಕ್ಕೆ ವಿಷಯಗಳಾಗಿವೆ. ಆ ದಶೋಪನಿಷತ್ತುಗಳಲ್ಲಿ ಮೊದಲನೆಯದು ಈಶೋಪನಿಷತ್ತು.

(೧) **ಈಶ** (೨) ಕೇನ (೩) ಕಠ (೪) ಪ್ರಶ್ನ (೫) ಮುಂಡ
(೬) ಮಾಂಡೂಕ್ಯ (೭) ತಿತ್ತಿರಿಃ | (೮) ಐತರೇಯಂ ಚ
(೯) ಛಾಂದೋಗ್ಯಂ (೧೦) ಬೃಹದಾರಣ್ಯಕಂ ದಶ ||

ಈ ಉಪನಿಷತ್ತಿನ ಮೊದಲ ಮಾತು "ಈಶಾವಾಸ್ಯ" ಎಂದಿರುವುದರಿಂದ ಇದಕ್ಕೆ "ಈಶೋಪನಿಷತ್ತು", "ಈಶಾವಾಸ್ಯೋಪನಿಷತ್ತು" ಎಂದು

ಹೆಸರು. ಇದು ಯಜುರ್ವೇದದ ವಾಜಸನೇಯ* ಶಾಖೆಗೆ ಸೇರಿದ್ದಾದಕಾರಣ ಇದನ್ನು "ವಾಜಸನೇಯೋಪನಿಷತ್ತು" ಎಂದೂ, ಇದು ಸಂಹಿತಾ ಭಾಗದಲ್ಲಿರುವ್ರದರಿಂದ "ಸಂಹಿತೋಪನಿಷತ್ತು" ಎಂದೂ ಕರೆಯುವುದುಂಟು. ಇದರಲ್ಲಿ ವಚನಭಾಗಗಳಿಲ್ಲದೆ ಎಲ್ಲವೂ ಮಂತ್ರ (ಶ್ಲೋಕ) ರೂಪದಲ್ಲಿರುವುದರಿಂದ "ಮಂತ್ರೋಪನಿಷತ್ತು" ಎಂದೂ ಇದಕ್ಕೆ ಹೆಸರುಂಟು.

ಈ ಉಪನಿಷತ್ತಿನ ಮೇಲೆ ಶಂಕರಾಚಾರ್ಯರೂ ಆನಂದತೀರ್ಥರೂ ಶ್ರೀವತ್ಸಾಂಕ ಕೂರನಾರಾಯಣರೂ ಭಾಷ್ಯಗಳನ್ನೂ; ಉವಟಭಟ್ಟ, ಬ್ರಹ್ಮಾನಂದ, ಶಂಕರಾನಂದ, ರಾಮಚಂದ್ರಪಂಡಿತ, ಆನಂದಭಟ್ಟ, ಅನಂತಾಚಾರ್ಯ—ಇವರುಗಳು ವ್ಯಾಖ್ಯಾನವಿವರಣೆಗಳನ್ನೂ ಬರೆದಿದ್ದಾರೆ. ಈ ಪುಸ್ತಕದಲ್ಲಿಯ ಕನ್ನಡ ಅನುವಾದದಲ್ಲಿ ಆ ಎಲ್ಲ ಟೀಕೆ ಟಿಪ್ಪಣಿಗಳನ್ನೂ ಉಚಿತಕಂಡಂತೆ ಉಪಯೋಗಪಡಿಸಿಕೊಂಡಿದೆ.

ಈ ಉಪನಿಷತ್ತಿನ ಉಪದೇಶವು ವೇದಮತಸ್ಥರಿಗೆ ಮಾತ್ರವೇ ಅಲ್ಲದೆ ಎಲ್ಲ ದೇಶಗಳ ಎಲ್ಲ ಮತಗಳ ಜನರಿಗೂ ಗ್ರಾಹ್ಯವಾಗತಕ್ಕದ್ದೆಂದು ಪ್ರಸ್ತುತದ ಅನುವಾದಕಾರನ ನಂಬಿಕೆ. ಆದಕಾರಣ ಅವನು ಪೂರ್ವಪದ್ಧತಿಯ ಅರ್ಥವು ಸೋಪಾಧಿಕದೃಷ್ಟಿಯದೆಂದು ತೋರಿದ ಕಡೆ ಅದನ್ನು ಬಿಟ್ಟು, ವಿಸ್ತಾರವಾದ ದೃಷ್ಟಿಯಿಂದ ಅರ್ಥಯೋಜನೆ ಮಾಡಿದ್ದಾನೆ.

"ಸೋಪಾಧಿಕ" ಎಂದರೆ ಶಿವ ವಿಷ್ಣು ಶಕ್ತಿ ಮೊದಲಾದ ದೇವತಾ ಪ್ರಭೇದಗಳ ವಿಚಾರಕ್ಕಾಗಲಿ, ಹಿರಣ್ಯಗರ್ಭ ಅವ್ಯಾಕೃತ ಮೊದಲಾದ ಮೀಮಾಂಸಾ ಪರಿಭಾಷೆಗಾಗಲಿ ಸಂಬಂಧಿಸಿದ "ಉಪಾಧಿ"ಗಳಿಂದ,—ಅರ್ಥಸಂಕೋಚಗಳಿಂದ,—ಕೂಡಿದ್ದು. ಉಪನಿಷದಾಚಾರ್ಯರು ಶೈವರನ್ನು ಮಾತ್ರ, ಅಥವಾ ವೈಷ್ಣವರನ್ನು ಮಾತ್ರ, ಅಥವಾ ಶಾಕ್ತೇಯರನ್ನು ಮಾತ್ರ ಉದ್ದೇಶಿಸಿದ್ದವರಲ್ಲ. ಅವರು ದ್ವೈತಾದ್ವೈತ ವಿಶಿಷ್ಟಾದ್ವೈತಗಳನ್ನು ಮಾತ್ರ ಲಕ್ಷ್ಯದಲ್ಲಿರಿಸಿಕೊಂಡು ಆ ಮತತ್ರಯದಲ್ಲಿ ಸೇರದವರನ್ನು ಗಣಿಸದೆ ಬಿಟ್ಟವರಲ್ಲ. ಅವರ ಲಕ್ಷ್ಯದಲ್ಲಿದ್ದವನು ಸಕಲ ಪ್ರಪಂಚ ಸಾಮಾನ್ಯನಾದ ಮಾನವನು—ಸಾರ್ವತ್ರಿಕ ಮಾನವನು. ಅವನು ಯಾವುದಾದರೊಂದು ಮತವನ್ನಿಟ್ಟುಕೊಂಡವನಾಗಿರಬಹುದು; ಯಾವ ಮತನಿಷ್ಕರ್ಷೆಯೂ ಇಲ್ಲದವನಾಗಿದ್ದರೂ

---

* "ವಾಜ" ಎಂದರೆ ಅನ್ನ. "ವಾಜಸನಿ" ಎಂದರೆ ಅನ್ನ ಕೊಡುವವನು (ಷಣು=ದಾನೇ)—ಸೂರ್ಯ ಎಂದರ್ಥ. ಯಾಜ್ಞವಲ್ಕ್ಯ ಮಹರ್ಷಿಗಳು ಸೂರ್ಯೋಪಾಸನೆಯಿಂದ ಯಾವ ವೇದವಾಙ್ಮಯವನ್ನು ವರಪ್ರಸಾದವಾಗಿ ಪಡೆದರೋ ಅದು ವಾಜಸನೇಯ ಶಾಖೆ. ಅದಕ್ಕೆ ಶುಕ್ಲ ಯಜುಶ್ಶಾಖೆಯೆಂದೂ ಪ್ರಥಮ ಶಾಖೆಯೆಂದೂ ಹೆಸರುಗಳುಂಟು.

ಇರಬಹುದು. ಅವನಿಗೂ ಉಪಕಾರಕವಾಗಬಲ್ಲದ್ದು ಈ ಉಪನಿಷತ್ತು. ಅವನು ಜಗದ್ರಹಸ್ಯಕುತೂಹಲಿಯಾಗಿದ್ದಲ್ಲಿ ಅವನಿಗೂ ಇದರಲ್ಲಿ ಸಮಾಧಾನ ದೊರೆಯು ಬೇಕು. ಹಾಗೆ ವಿಶ್ವಸಾಮಾನ್ಯಮಾನವನಿಗೆ ಮಾರ್ಗದೀಪಕವಾಗಬಲ್ಲ ದ್ದೆಂಬುದೇ ಈ ಉಪನಿಷತ್ತಿಗಿರುವ ದೊಡ್ಡ ಬೆಲೆ. ಉಪನಿಷತ್ತಿನಲ್ಲಿ ಪ್ರಾಸಂಗಿಕ ವಾಗಿ ದೇವತಾ ತಾರತಮ್ಯವಾದಗಳೂ ದಾರ್ಶನಿಕ ಪರಿಭಾಷೆಗಳೂ ಬರಬಹುದು. ಅವು ಗೌಣಾಂಶಗಳು, ಮುಖ್ಯಾಂಶಗಳಲ್ಲ. ಅದರ ಮುಖ್ಯಾಂಶವು ಸಕಲ ಜನಾಸ್ವೇದ್ಯವಾದ ಜಗಜ್ಜೀವತತ್ತ್ವ.

"ಉಪನಿಷತ್" ಎಂಬ ಮಾತಿಗೆ ಅನೇಕ ರೀತಿಗಳಲ್ಲಿ ಅರ್ಥಕಲ್ಪನೆ ಮಾಡಿದ್ದಾರೆ. ಅವುಗಳಲ್ಲಿ ಸಹಜವೆಂದು ತೋರುವವು ಎರಡು. (೧) [ಉಪ+ನಿ+ಷದ್] "ಸಮೀಪಕ್ಕೆ ಕರೆದುಕೊಂಡುಹೋಗಿ ತಲಪಿಸು ವುದು,"—ಎಂದರೆ ಯಾವ ವಾಙ್ಮಯವು ಅನ್ವೇಷಿಯನ್ನು ಸತ್ಯದ ಬಳಿಗೆ ಕರೆದುಕೊಂಡುಹೋಗಿ ಅದನ್ನು ಮುಟ್ಟಿಸಬಲ್ಲದೋ ಅದು ಉಪನಿಷತ್ತು. (೨) "ಸಮೀಪದಲ್ಲಿ ನಿಷ್ಠೆಯಿಂದ ಕುಳಿತಿರುವಂತೆ ಮಾಡುವುದು,"—ಎಂದರೆ ಯಾವ ವಿದ್ಯೆಯ ಉಪದೇಶಕ್ಕಾಗಿ ಗುರುವಿನ ಹತ್ತಿರ ತದೇಕಚಿತ್ತದಿಂದ ಕುಳಿತಿರಬೇಕೋ ಅದು ಉಪನಿಷತ್ತು. ಹೀಗೆ ಎರಡು ರೀತಿಗಳಲ್ಲಿಯೂ ಉಪನಿಷತ್ತೆಂದರೆ ಬ್ರಹ್ಮವಿದ್ಯೆಯೆಂದೂ ಅದು ರಹಸ್ಯವಾದದ್ದೆಂದೂ ಸೂಚಿತ ವಾಗುತ್ತದೆ.

## ಮುಖ್ಯೋಪದೇಶ

ಈಶೋಪನಿಷತ್ತು ಹುಟ್ಟಿದ ಕಾಲದಲ್ಲಿ ನಮ್ಮ ತತ್ತ್ವಜಿಜ್ಞಾಸುಗಳಲ್ಲಿ ಒಂದು ತಕರಾರು ಎದ್ದಿದ್ದಂತೆ ಕಾಣುತ್ತದೆ. ಮೋಕ್ಷಕ್ಕೆ,—ಎಂದರೆ ಪರಮ ಪುರುಷಾರ್ಥದ ಸಾಧನೆಗೆ,—ಅಥವಾ ಬ್ರಹ್ಮದರ್ಶನಕ್ಕೆ—ಜ್ಞಾನಮಾರ್ಗ ತಕ್ಕದ್ದೆ, ಕರ್ಮಮಾರ್ಗ ತಕ್ಕದ್ದೆ, ಎರಡೂ ಬೆರತುಕೊಂಡಿರುವುದು ತಕ್ಕದ್ದೆ? ಇದು ಆ ತಕರಾರು. ಇದನ್ನು ಇನ್ನೂ ಸ್ಪಷ್ಟವಾದ ಭಾಷೆಯಲ್ಲಿ ಹೇಳುವುದು ಅವಶ್ಯವೆಂದು ತೋರುತ್ತದೆ. ಜ್ಞಾನಮಾರ್ಗವೆಂದರೆ ಆಗಿನ ಪರಿಭಾಷೆಯಲ್ಲಿ ಸಂನ್ಯಾಸ; ಕರ್ಮಮಾರ್ಗವೆಂದರೆ ಗೃಹಸ್ಥಾಶ್ರಮ. ಒಂದು ಪಕ್ಷ ವೈರಾಗ್ಯ, ಅಥವಾ ನಿವೃತ್ತಿ; ಇನ್ನೊಂದು ಪಕ್ಷ ಸಂಸಾರ, ಅಥವಾ ಪ್ರವೃತ್ತಿ. ಈ ಎರಡರಲ್ಲಿ ಮುಮುಕ್ಷುವು ಯಾವುದನ್ನು ಅವಲಂಬಿಸಬೇಕು? ಇದು ಆಗಿನ ವಿವಾದ.

ಚಾಕು ಎಂಬ ಆಯುಧದಲ್ಲಿ ಉಕ್ಕಿನ ಪಟ್ಟೆ ಒಂದು ಭಾಗ, ಅಲಗು

ಇನ್ನೊಂದು ಭಾಗ. ಪದಾರ್ಥವನ್ನು ಕುಯ್ಯುವುದೇನೋ ಅಲಗೇ. ಅಲಗಿಲ್ಲದ ಚೂರಿ ಎಷ್ಟು ದೊಡ್ಡದಾಗಿ ದಪ್ಪವಾಗಿದ್ದರೂ ಕುಯ್ಯಲಾರದು. ಆದರೆ ಪಟ್ಟಿ ಇಲ್ಲದೆ ಬರಿಯ ಅಲಗಿರುವುದುಂಟೋ ? ಅಲಗೆಂಬುದು ಪಟ್ಟಿಯ ಒಂದಂಚು ತಾನೆ ? ತತ್ತ್ವಜ್ಞಾನದ ವಿಚಾರವೂ ಹಾಗೆಯೇ. ಕರ್ಮಸಂಸ್ಕಾರದಿಂದ ಮನಸ್ಸು ಪಕ್ವವಾಗದಿದ್ದಲ್ಲಿ ಜ್ಞಾನವು ಅಂಕುರಿಸಲೇ ಆರದು. ಮೋಕ್ಷಕ್ಕೆ ಜ್ಞಾನ ಬೇಕು. ಜ್ಞಾನಕ್ಕೆ ಕರ್ಮ ಬೇಕು. ಕರ್ಮವು ಜ್ಞಾನಕ್ಕೆ ದಾರಿಮಾಡಿ ಕೊಡಬೇಕಾದರೆ ಅದು ಸ್ವಾರ್ಥಸ್ಪರ್ಶವಿಲ್ಲದ ಕರ್ಮವಾಗಿರಬೇಕು. ಹೀಗೆ ವಿರಕ್ತಿಪೂರ್ವಕವಾದ ಲೋಕಜೀವನವೇ ಬ್ರಹ್ಮಪ್ರಾಪ್ತಿಗೆ ಅವಶ್ಯವಾದ ಜ್ಞಾನಕ್ಕೆ ಮಹಾದ್ವಾರ.

ಇಲ್ಲಿ ಕರ್ಮವೆಂದರೆ ಏನು ? ಕೆಲವು ವ್ಯಾಖ್ಯಾನಗಳನ್ನು ನೋಡಿದರೆ ಅವುಗಳ ಲೇಖಕರು ಯಜ್ಞಯಾಗಾದಿ ದೇವತೋದ್ದಿಷ್ಟ ಕರ್ಮಗಳನ್ನು ಮಾತ್ರ ದೃಷ್ಟಿಯಲ್ಲಿರಿಸಿಕೊಂಡು ಲೋಕವ್ಯವಹಾರಗಳನ್ನು ಹೊರಗಿರಿಸಿರುವಂತೆ ತೋರುತ್ತದೆ. ಹೀಗೆ ಮಾಡಲು ವೇದವಾಕ್ಯದಲ್ಲಿಯಾಗಲಿ ಅಥವಾ ಅದರ ಇಂಗಿತದಲ್ಲಿಯಾಗಲಿ ಕಾರಣ ಕಾಣುವುದಿಲ್ಲ. ಕರ್ಮವೆಂದರೆ ಶಾಸ್ತ್ರವಿಹಿತಕರ್ಮ. ಶಾಸ್ತ್ರವೆಂದರೆ ಸಮಗ್ರ ಧರ್ಮಶಾಸ್ತ್ರ. ಧರ್ಮವೆಂಬುದರಲ್ಲಿ ಜೀವಿಕಾವೃತ್ತಿ ಅಥವಾ ಕಸಬು, ರಾಷ್ಟ್ರಕ ಪ್ರಜೆಯ ಕರ್ತವ್ಯ, ಸಮಾಜಹಿತಾರ್ಥ, ಭೂತದಯೆ ಮೊದಲಾದ ಎಲ್ಲ ಲೌಕಿಕ ವ್ಯಾಪಾರಗಳೂ ಸೇರಿರುತ್ತವೆ. ಅವೆಲ್ಲ ಕರ್ಮಗಳೇ. ಇಂಥಾ ವಿಸ್ತಾರವಾದ ಅರ್ಥವನ್ನು ಕರ್ಮಶಬ್ದಕ್ಕೆ ಕೊಡುವುದು ಯುಕ್ತವೇ ಹೊರತು ಆ ಅರ್ಥವನ್ನು ಸಂಕೋಚಮಾಡುವುದು ಸಾಧುವಾಗಲಾರದು. ಕರ್ಮ ಎಂದರೆ ಚತುರ್ವಿಧ ಪುರುಷಾರ್ಥ ಕ್ರಿಯೆ, ಅದೇ " ಪ್ರವೃತ್ತಿಧರ್ಮ ".

ಮುಮುಕ್ಷುವಿಗೆ ಪ್ರವೃತ್ತಿಧರ್ಮದಿಂದ ಆಗಬೇಕಾದ ಪ್ರಯೋಜನ ಒಂದಿದೆ, ನಿವೃತ್ತಿಧರ್ಮದಿಂದ ಆಗಬೇಕಾದ ಪ್ರಯೋಜನ ಇನ್ನೊಂದಿದೆ. ಪ್ರವೃತ್ತಿಧರ್ಮ ಹೇಗೆ ನಡೆಯಬೇಕೋ ಹಾಗೆ ನಡೆದಲ್ಲದೆ ನಿವೃತ್ತಿಧರ್ಮ ಸಾಂಗವಾಗಿ ನಡೆಯದು. ಹಾಗಾದರೆ ನಿವೃತ್ತಿಗೆ ಅನುಕೂಲವಾಗುವಂಥ ಆ ಪ್ರವೃತ್ತಿಯ ಲಕ್ಷಣವೇನು ? ಯಾವ ರೀತಿ ಬದುಕನ್ನು ನಡಸಿದರೆ ಬದುಕಿನ ಹೊರೆ ಹಗುರವಾಗಿ, ನಮ್ಮ ಕಣ್ಣಿಗೆ ಎಂದೆಂದಿಗೂ ಅಳಿಯದಿರುವ ಬೆಳಕು ಕಾಣಬರುತ್ತದೆ ? ಈ ಪ್ರಶ್ನೆಗೆ ಉತ್ತರವನ್ನು ಚಿಕ್ಕಚಿಕ್ಕ ಮಾತುಗಳಲ್ಲಿ ಸಂಗ್ರಹವಾಗಿ ತಿಳಿಸಿರುವುದೇ ಈಶೋಪನಿಷತ್ತು ನಮಗೆ ಮಾಡಿರುವ ವಿಶೇಷೋಪಕಾರ. ಬದುಕುವುದು ಕರ್ತವ್ಯ. ಹೇಗೆ ಬದುಕಿದರೆ ಚೆನ್ನ ?

ಇದನ್ನು ಈ ಉಪನಿಷತ್ತು ತಿಳಿಸುತ್ತದಾಗಿ, ಇದು ಇಂದಿನ ಲೋಕಕ್ಕೆ ಹೆಚ್ಚು ಬೆಲೆಯುಳ್ಳದ್ದಾಗಿದೆ.

ಜೀವನದ ಪರಮಧ್ಯೇಯವೇನಾಗಿರಬೇಕೆಂಬ ವಿಚಾರದಲ್ಲಿ ಲೋಕದ ಮನಸ್ಸು ಈ ಹೊತ್ತಿಗೂ ಇಬ್ಬಗೆಯಾಗಿದೆ. ಐಹಿಕಭೋಗ, ಇಂದ್ರಿಯಾಪ್ಯಾಯನ, ಸರ್ವವಿಸ್ಮಾರಕವಾದ ಬಾಹ್ಯವ್ಯಾಪಾರವಿಷಯಮಗ್ನತೆ—ಇದು ಪಾಶ್ಚಾತ್ಯ ಜನದ ಸಾಮಾನ್ಯ ಮನೋವೃತ್ತಿ. ನೂತನ ವಿಜ್ಞಾನಸಿದ್ಧಗಳಾದ ರಾಸಾಯನಿಕ ದ್ರವ್ಯಗಳಿಂದಲೂ ಶಸ್ತ್ರಸಾಧನಗಳಿಂದಲೂ ಆರೋಗ್ಯವನ್ನೂ ಆಯುರ್ವೃದ್ಧಿಯನ್ನೂ ಗಳಿಸಿಕೊಳ್ಳುವುದು, ವಿವಿಧ ವಾಹನಸೌಕರ್ಯಗಳಿಂದ ದೇಶವಿದೇಶಗಳನ್ನು ಸುತ್ತುವುದು, ಹೊಸಹೊಸ ಆಹಾರಪಾನಪೀಠಪರಿಕರಗಳಿಂದ ಹೊಸಹೊಸ ಸುಖಾನುಭವಗಳನ್ನು ಸಂಪಾದಿಸುವುದು, ಮುಖ್ಯವಾಗಿ ಮನಸ್ಸನ್ನು ಯಾವುದೋ ಒಂದು ಬಾಹ್ಯೋದ್ವೇಗದಲ್ಲಿ ಲೀನವಾಗಿಸಿಡುವುದು— ಇದು ಪಾಶ್ಚಾತ್ಯರ ಪುರುಷಾರ್ಥ. ಭೋಗಕ್ಕಾಗಿ ಜನ್ಮ ; ಮನಸ್ಸಿನ ಉದ್ರೇಕವೇ ಸೌಖ್ಯ—ಇದು ಪ್ರವೃತ್ತಿಪಂಥದ ಅತಿರೇಕ,—ವಿಪರೀತಪ್ರವೃತ್ತಿ.

ಇದರಿಂದ ವಿಲಕ್ಷಣವಾದದ್ದು ನಮ್ಮ—ಭಾರತೀಯರ—ಇಂದಿನ ಮನೋವೃತ್ತಿ. ಅದನ್ನು ಪ್ರವೃತ್ತಿಯೆನ್ನೋಣವೆಂದರೆ ಅದು ಪೌರುಷಪೂರ್ವಕವಾದ ಪ್ರವೃತ್ತಿಯಲ್ಲ. ಪಾಶ್ಚಾತ್ಯರ ಪ್ರವೃತ್ತಿಯಲ್ಲಿ ಪೌರುಷವಿದೆ; ಶ್ರದ್ಧೆಯಿದೆ; ದಕ್ಷತೆಯಿದೆ. ನಮ್ಮದು ಅರೆಮನಸ್ಸಿನ ಮತ್ತು ವಿಚಕ್ಷಣೆಯಿಲ್ಲದ ನಿರ್ವೀರ್ಯ ವರ್ತನೆ. ಇದನ್ನು ನಿವೃತ್ತಿಯೆನ್ನೋಣವೆಂದರೆ ಭೋಗಲಾಲಸೆ ನಮಗೇನೂ ಕಡಮೆಯಾಗಿಲ್ಲ. ಪಾಶ್ಚಾತ್ಯರ ವೈಭವ ವಿಲಾಸಗಳನ್ನು ನೋಡಿ ನಾವು ಹೊಟ್ಟೆ ಕಿವುಚಿಕೊಳ್ಳುತ್ತೇವೆ. ಅವರ ಸಾಹಸ ಸ್ವೇಚ್ಛಾಚಾರಗಳನ್ನು ಪ್ರಗತಿಯೆಂದು ಕೊಂಡಾಡುತ್ತೇವೆ. ಅವರ ಸಂಪತ್ಪ್ರತಾಪಗಳು ನಮಗೂ ಬೇಕು ; ಆದರೆ ಬೇಡವೇನೋ ಎಂಬಂತೆ ನಡೆಯುತ್ತಿದ್ದೇವೆ. ನಾವು ಇತ್ತ ಲೌಕಿಕದಲ್ಲಿ ಕೃತಕೃತ್ಯರಾಗಿಲ್ಲ ; ಅತ್ತ ವಿರಕ್ತಿಯಲ್ಲಿ ಸಿದ್ಧಾರ್ಥರಾಗಿಲ್ಲ. ನಮ್ಮದು ರೋಗಿಯ ಚಿತ್ತದೌರ್ಬಲ್ಯ,—ಚಪಲತೆ,—ತೇಜೋವಿಹೀನತೆ. ಉಭಯ ಧರ್ಮರಿಕ್ತರು ನಾವು.

ಇನ್ನೂ ಒಂದು ಚೋದ್ಯವುಂಟು : ಪಾಶ್ಚಾತ್ಯರ ಪ್ರವೃತ್ತಿನಿಷ್ಠೆಯಿಂದ ಅವರ ಜೀವನ ನಿರುಪದ್ರವವಾಗಿ ನಡೆಯುತ್ತಿದೆಯೆಂದಾಗಲಿ ಹಾಗೆ ನಡೆಯುವ ಭರವಸೆ ತೋರುತ್ತಿದೆಯೆಂದಾಗಲಿ ಯಾರೂ ಹೇಳರು. ಅವರ ಯಾವ ಸ್ವಭಾವಗುಣಗಳು ಭೋಗಾನ್ವೇಷಣೆಯನ್ನು ಪ್ರೇರಿಸುತ್ತಿವೆಯೋ ಅದೇ ಸ್ವಭಾವದ ಇನ್ನು ಕೆಲವು ಗುಣಗಳು ಆ ಪ್ರಯತ್ನವನ್ನು ವಿಕಾರಪಡಿಸುತ್ತಿವೆ.

ಸಂಪತ್ಸಾಧನೆಯ ಸ್ಪರ್ಧೆಯಲ್ಲಿ ದೇಶ ದೇಶಕ್ಕೂ ಜನವರ್ಗ ಜನವರ್ಗಕ್ಕೂ ಮಾತ್ಸರ್ಯವೈಷಮ್ಯಗಳು ಬೆಳೆಯುತ್ತಿವೆ. ಇದರ ಜೊತೆಗೆ ದೈಹಿಕಭೋಗ ಮಾತ್ರದಿಂದ ಆತ್ಮಸಂತೃಪ್ತಿಯಾಗಲಾರದೆಂಬುದನ್ನೂ ಪಾಶ್ಚಾತ್ಯಲೋಕ ಕಂಡುಕೊಳ್ಳುತ್ತಿದೆ. ಮಾನವಜೀವನವೆಂದರೆ ಉಣ್ಣುವುದು, ಉಡುವುದು, ಮೆರೆಯುವುದು, ಮೈಮರೆಯುವುದು—ಇಷ್ಟೇ ಅಲ್ಲ. ಈ ದೇಹದ ಹಸಿವುಗಳೆಲ್ಲ ತೀರಿದಮೇಲೂ ಅಂತರಂಗದಲ್ಲಿ ಏನೋ ಒಂದು ಕೊರಗು—ಒಂದು ಬಯಕೆ—ಉಳಿದುಕೊಂಡಿರುತ್ತದೆ. ಆ ಒಳಹಸಿವು ಹೊರಗಣ ಉಪಚಾರಗಳಿಂದ ತೀರತಕ್ಕದ್ದಲ್ಲ; ಅದು ಆಧ್ಯಾತ್ಮಿಕವಿರಬಹುದು—ಎಂಬ ಅನುಮಾನವೂ ಪಾಶ್ಚಾತ್ಯರಲ್ಲಿ ತಲೆದೋರುತ್ತಿದೆ. ಎಲ್ಲ ಸುಖಸಾಮಗ್ರಿ ಇದ್ದರೂ ನೆಮ್ಮದಿ ಇಲ್ಲವಾಗಿದೆ ಆ ಪ್ರಪಂಚದಲ್ಲಿ. ನಿವೃತ್ತಿಧರ್ಮವನ್ನು ಮರೆತ ಪ್ರವೃತ್ತಿಯ ಗತಿ ಹಾಗೆ.

ಅರ್ಜುನನು ಪ್ರವೃತ್ತಿಧರ್ಮವನ್ನು ತೊರೆದು ನಿವೃತ್ತನಾಗುವೆನೆಂದ. ಅದಾಗದೆಂದು ಕೃಷ್ಣನು ಕಾರಣ ತೋರಿಸಿದ್ದೇ ಭಗವದ್ಗೀತೆ.

ಪ್ರವೃತ್ತಿ ನಿವೃತ್ತಿಗಳೆರಡರ ಸಮನ್ವಯವನ್ನು ಬೋಧಿಸಿರುವುದೇ ಈಶೋಪನಿಷತ್ತಿನ ವಿಶೇಷಗುಣ. ಬದುಕಬೇಕು, ಭೋಗವೇ ದೊಡ್ಡದೆಂದುಕೊಳ್ಳದೆ ಬದುಕಬೇಕು—ಈಶ್ವರಸೇವೆಗಾಗಿ ಬದುಕಬೇಕು; ಲೋಕಕಾರ್ಯಗಳನ್ನು ಮಾಡಬೇಕು, ಸ್ವಾರ್ಥದ ಸೋಂಕಿಲ್ಲದೆ ಮಾಡಬೇಕು; ಸಂತೋಷ ಪಡಬೇಕು, ಅಹಂಕಾರ ಮಮಕಾರಗಳನ್ನು ದೂರಮಾಡಿ ಸಂತೋಷ ಪಡಬೇಕು. ಪ್ರವೃತ್ತಿಯಿಲ್ಲದೆ—ಲೌಕಿಕ ಜೀವನವಿಲ್ಲದೆ—ಅಂತರಂಗಶೋಧನೆಯಿಲ್ಲ. ಅಂತರಂಗಶೋಧನೆಯಿಲ್ಲದ ನಿವೃತ್ತಿಗೆ—ಸಂನ್ಯಾಸಕ್ಕೆ—ಸಾರ್ಥಕ್ಯವಿಲ್ಲ. ಅಂಥ ಪರಿಶುದ್ಧ ನಿವೃತ್ತಿಮೂಲಕವಲ್ಲದೆ ತತ್ತ್ವಸಾಕ್ಷಾತ್ಕಾರವಿಲ್ಲ. ತತ್ತ್ವಸಾಕ್ಷಾತ್ಕಾರವಿಲ್ಲದೆ ಮನುಷ್ಯನಿಗೆ ಲೋಕಜೀವನದ ದ್ವಂದ್ವಜಾಲಿಕೆಯಿಂದ ಬಿಡುಗಡೆಯಿಲ್ಲ. ಲೋಕಾಸಕ್ತಿ ಸ್ವಾರ್ಥವಿರಕ್ತಿಗಳೆರಡನ್ನೂ ಜೋಡಿಗೂಡಿಸಿ ಬಾಳಬಲ್ಲವನೇ ಯೋಗಿ. ಅವನನ್ನು ಯಾವ ದೋಷವೂ ಯಾವ ದುಃಖವೂ ಮುಟ್ಟದು. ಇದು ಈಶೋಪನಿಷತ್ತಿನ ಬೋಧನೆ. ಈ ನೀತಿಸೂತ್ರ ಯಾವ ಮನುಷ್ಯನಿಗೆ ಅನಾವಶ್ಯಕ? ಅದರಿಂದ ಲಭಿಸುವ ಆತ್ಮಶಾಂತಿ ಯಾರಿಗೆ ಬೇಡ?

# ಈಶೋಽಪನಿಷತ್ತು

## ಶಾಂತಿಪಾಠ

ಸಾಮಾನ್ಯವಾಗಿ ಉಪನಿಷತ್ಪಾಠದ ಪ್ರಾರಂಭದಲ್ಲಿ ಗೊತ್ತಾದ ಕೆಲವು ಶಾಂತಿವಾಕ್ಯಗಳನ್ನು ಹೇಳುವುದು ಸಂಪ್ರದಾಯ.

ಕೆಲವು ಶಾಂತಿವಾಕ್ಯಗಳು ಇಂದ್ರ ಮೊದಲಾದ ದೇವತೆಗಳನ್ನು ಅಂಗಾಂಗಪಟುತ್ವ ಮೊದಲಾದ ಅನುಗ್ರಹಗಳಿಗಾಗಿ ಪ್ರಾರ್ಥಿಸುತ್ತವೆ

ಈಶಾವಾಸ್ಯೋಪನಿಷತ್ತಿನ ಶಾಂತಿಪಾಠವು ಹಾಗೆ ವರಗಳನ್ನು ಬೇಡದೆ ಜಗತ್ತಿಗೂ ಈಶ್ವರನಿಗೂ ಇರುವ ಅನ್ಯೋನ್ಯಭಾವವನ್ನು ಸೂಚಿಸಿ, ಆ ಮೂಲಕ ನಮಗೆ ಜೀವಿತ ವಿಷಯದಲ್ಲಿ ಗೌರವಬುದ್ಧಿಯನ್ನು ಪ್ರೋತ್ಸಾಹಿಸತಕ್ಕದ್ದಾಗಿದೆ. ಅದರ ಅರ್ಥ ಹೀಗೆ:—

"ಪೂರ್ಣನಾದವನು ಈಶ್ವರ; ಪೂರ್ಣವಾದದ್ದು ಜಗತ್ತು. ಆ ಪೂರ್ಣದಿಂದ ಈ ಪೂರ್ಣ ಬಂದಿದೆ. ಪೂರ್ಣವಾದದ್ದರಿಂದ ಪೂರ್ಣವಾದದ್ದನ್ನು ತೆಗೆದಮೇಲೆ ಉಳಿದಿರತಕ್ಕದ್ದೂ ಪೂರ್ಣವೇ."

ಇಲ್ಲಿ ಒಂದು ಪ್ರಶ್ನೆ ಹುಟ್ಟಬಹುದು. ಎರಡು ಪೂರ್ಣ ವಸ್ತುಗಳಿರುವುದು ಸಾಧ್ಯವೆ? "ಪೂರ್ಣ" ಎಂದರೆ ಕುಂದುಕೊರತೆಗಳಿಲ್ಲದೆ ಇರುವುದು,—ಎಲ್ಲೆಲ್ಲೂ ತಾನೇತಾನಾಗಿ ತುಂಬಿಕೊಂಡಿರುವುದು,—ಮಿತಿ ಮೇರೆ ಇಲ್ಲದಿರುವುದು ಎಂದರ್ಥ. ಇರುವ ವಸ್ತುಗಳು ನಿಜವಾಗಿ ಎರಡಾಗಿ, ಅವು ಸ್ವಭಾವದಲ್ಲಿ ಬೇರೆಬೇರೆಯಾದ ಪಕ್ಷದಲ್ಲಿ, ಅವುಗಳಲ್ಲೊಂದರಿಂದ ಇನ್ನೊಂದಕ್ಕೆ ಮಿತಿಯುಂಟಾಗುತ್ತದಲ್ಲವೆ? ಒಂದು ಮುಗಿದರಲ್ಲವೆ ಇನ್ನೊಂದು ಮೊದಲಾಗುವುದು? ಹೀಗೆ ಒಂದರ ಪೂರ್ಣತೆ ಇನ್ನೊಂದರ ಅಸ್ತಿತ್ವದಷ್ಟು ಮಟ್ಟಿಗೆ ನ್ಯೂನವಾಗುತ್ತದೆ. ಹಾಗಾದರೆ ಬ್ರಹ್ಮ, ಜಗತ್ತು—ಈ ಎರಡೂ ಹೇಗೆ ಪೂರ್ಣಗಳು? ಎಂದರೆ, ಅವುಗಳ ಇರ್ತನ,—ಎರಡಾಗಿರುವಿಕೆ,—ಬರಿಯ ದೃಶ್ಯವೇ ವಿನಾ ವಾಸ್ತವವಲ್ಲ—ಎಂದು ಸಮಾಧಾನ. ಹಾಗೆಯೇ ಒಂದರಿಂದ ಇನ್ನೊಂದನ್ನು ಕಳೆಯುವುದೆಂಬುದೂ ಕೇವಲ ಮಾನಸಿಕಕ್ರಿಯೆ, ವಾಸ್ತವಕ್ರಿಯೆಯಲ್ಲ. ಪರಮಾರ್ಥದೃಷ್ಟಿಯಲ್ಲಿ ಆ ಉಭಯವೂ ಏಕೈಕತತ್ತ್ವವೇ, ಭಿನ್ನಗಳಲ್ಲ. ಅವುಗಳ ಆಕೃತಿಯೂ ಅವಸ್ಥೆಯೂ ಬೇರೆಬೇರೆ; ಸತ್ತ್ವ ಮಾತ್ರ ಬೇರೆಯಲ್ಲ, ಸತ್ತ್ವ ಒಂದೇ ಒಂದು. ಈಶ್ವರನು ಕಾರಣ, ಜಗತ್ತು ಕಾರ್ಯ. ಕಾರಣದಲ್ಲಿ ಕಾರ್ಯ ಯಾವಾಗಲೂ ಅಡಗಿಕೊಂಡಿರುತ್ತದೆ—ಮೊಗ್ಗಿನಲ್ಲಿ ಹೂವು ಅಡಗಿಕೊಂಡಿರುವಂತೆ. ಹೀಗೆ ಜಗತ್ತು ಈಶ್ವರನ ಅವತಾರ ಲೀಲೆಯೆಂಬುದನ್ನು—ಜೀವಕ್ಕಿರುವ ಬ್ರಹ್ಮಸಂಬಂಧವನ್ನು—ಈ ಶಾಂತಿಪಾಠವು ನಮ್ಮ ಜ್ಞಾಪಕಕ್ಕೆ ತರುತ್ತದೆ.

# ಈಶೋಪನಿಷತ್ತು

## (೧) ಲೋಕ ಈಶ್ವರನದು

ಈ ಜಗತ್ತಿನಲ್ಲಿ ಯಾವಯಾವುದು ಇದೆಯೋ ಅದೆಲ್ಲ ಈಶ್ವರನ ಮನೆ; ಮತ್ತು ಅದಕ್ಕೆಲ್ಲ ಈಶ್ವರನು ಮನೆ. ಈ ಜಗತ್ತನ್ನು ನೀನು ನನ್ನದಲ್ಲವೆಂಬ ಭಾವದಿಂದ ಅನುಭವಿಸತಕ್ಕದ್ದು ; ಮತ್ತು ಇದು ನಿನಗೆ ಈಶ್ವರನಿಂದ ಬಂದ ಪ್ರಸಾದವೆಂದು ಅನುಭವಿಸತಕ್ಕದ್ದು. ಯಾರೊಬ್ಬರ ಒಡವೆಗಾಗಿಯೂ ಆಶೆಪಡಬೇಡ. ಒಡವೆ ಯಾವುದೇ ಆಗಲಿ, ಅದು ಯಾರದು ? [ಈಶ್ವರನದೇ ಎಂದು ಭಾವ.] (೧)

## (೨) ಜೀವನ ಕೆಟ್ಟದ್ದಲ್ಲ

ಈ ಲೋಕದಲ್ಲಿ ನೀನು ಮಾಡಬೇಕಾದ ಕರ್ತವ್ಯಗಳನ್ನು ಮಾಡಿಕೊಂಡೇ ಒಂದುನೂರು ವರ್ಷ ಬಾಳಲು ಮನಸ್ಸುಮಾಡಬೇಕು. ಹಾಗೆ ನೀನು (ಸ್ವಂತ ಭೋಗಕ್ಕಾಗಲ್ಲದೆ ಈಶ್ವರಸೇವಾಬುದ್ಧಿಯಿಂದ) ಬಾಳು ಬಾಳಿದರೆ ನಿನ್ನನ್ನು ಕರ್ಮದ ದೋಷ ಅಂಟದು. ನೀನು ಸದ್ಗತಿಪಡೆಯಲು ಅದಲ್ಲದೆ ಬೇರೆ ದಾರಿಯಿಲ್ಲ. (೨)

ಕರ್ತವ್ಯಕರ್ಮಗಳನ್ನು ಮಾಡಿಯೇ ತೀರಬೇಕೆಂದು ಉಪನಿಷತ್ತು ವಿಧಿಸಿದೆ. ಆದರೆ ಇಲ್ಲಿ ಒಂದು ಕಷ್ಟವುಂಟು. ಕರ್ತವ್ಯಾಚರಣೆಯ ಪ್ರಸಂಗದಲ್ಲಿ ಮನುಷ್ಯನು ತಿಳಿದೋ ತಿಳಿಯದೆಯೋ ಪುಣ್ಯವನ್ನೋ ಪಾಪವನ್ನೋ ಮಾಡುವುದು ಅನಿವಾರ್ಯವಲ್ಲವೆ ? ಮಾಡಿದ್ದರಲ್ಲಿ ಪಾಪವಿದ್ದರೆ ಅದರ ಫಲವಾಗಿ ನೀಚಜನ್ಮಪ್ರಾಪ್ತಿಯೂ, ತತ್ಫಲಿತವಾಗಿ ಮತ್ತಷ್ಟು ಪಾಪ ಪ್ರಚೋದನೆಯೂ ಸಂಭವಿಸುತ್ತವೆ. ಮಾಡಿದ್ದರಲ್ಲಿ ಪುಣ್ಯವಿದ್ದರೆ ಅದರ ಫಲವಾಗಿ ಐಶ್ವರ್ಯ ಭೋಗಗಳೊದಗಿ ಅದರಿಂದ ಮತ್ತಷ್ಟು ಕಾಮನೆಗಳೂ ಮದಮಾತ್ಸರ್ಯಗಳೂ ಪ್ರೋತ್ಸಾಹ ಗೊಂಡು, ಹಾಗೂ ಜೀವವು ಮತ್ತೆ ಅಧೋಗತಿಗೆ ಇಳಿಯಬಹುದು ಅಂತೂ ಇಂತೂ ಕರ್ಮವೆಂಬುದು ಜೀವೋದ್ಧಾರಕ್ಕೆ ಪ್ರತಿಕೂಲವಲ್ಲವೆ ? ಎಂದರೆ—

ಪ್ರತಿಕೂಲವಾದದ್ದು ಕರ್ಮವಲ್ಲ, ಕರ್ಮಫಲ. ಕರ್ಮದ್ರುಮದಲ್ಲಿ ಫಲಬಿಡುವುದು ಯಾವಾಗ ? ಆ ಕರ್ಮದಲ್ಲಿ ಕರ್ತನ ಸ್ವಾರ್ಥಚಿಂತನೆ ಸೇರಿಕೊಂಡಿರುವಾಗ. ಕರ್ತೃವು— "ಈ ಕಾರ್ಯದಿಂದ ಈಶ್ವರಪ್ರೀತಿಯಾಗಲಿ ; ಇದು ನನಗೋಸ್ಕರವಾದದ್ದಲ್ಲ, 'ನ ಮಮ, ನ ಮಮ' " ಎಂದು ಮನೋನಿಶ್ಚಯ ಮಾಡಿಕೊಂಡಿದ್ದದ್ದೇ ಆದರೆ, ಆ ಕರ್ಮದಿಂದ ಹುಟ್ಟಿದ ವೃಕ್ಷದಲ್ಲಿ ಪುಣ್ಯಪಾಪರೂಪವಾದ ಫಲಗಳು ಉದಿಸಲಾರವು. ಅದರ ಫಲಗಳು ಲೋಕಕ್ಕೆ, ಈಶ್ವರಾರ್ಪಣೆಗಾಗಿ ಆಗುತ್ತವೆ,—ಕರ್ತೃವಿಗಲ್ಲ, ಸ್ವೋಪಭೋಗಕ್ಕಾಗಿ ಅಲ್ಲ. ಆದದ್ದ ರಿಂದ ಸ್ವಾರ್ಥಮಿಶ್ರಿತಕರ್ಮವು ಬಿಡಲ್ಪಡಬೇಕಾದದ್ದು , ನಿಃಸ್ವಾರ್ಥಕರ್ಮವು ಮಾಡಲ್ಪಡ

ಬೇಕಾದದ್ದು. ಇಂಥಾ ಫಲಾಸಕ್ತಿಯಿಲ್ಲದ ಕರ್ತವ್ಯಾಚರಣೆಯೇ ನೈಷ್ಕರ್ಮ್ಯ. ಅದನ್ನೇ ಶ್ರೀಕೃಷ್ಣನು ಅರ್ಜುನನಿಗೆ ಗೀತೆಯಲ್ಲಿ ಉಪದೇಶಿಸಿದ್ದು (ಅ. ೧೮-೪೯).

ಇಲ್ಲಿಯ ("ಜಿಜೀವಿಷೇತ್") ಜೀವಿಸಲಿಚ್ಛಿಸಬೇಕಾದದ್ದು ಎಂಬ ಭಾವವನ್ನು ಶ್ರುತಿಸ್ಮೃತಿಗಳು ಎಷ್ಟೋ ಕಡೆ ಹೇಳಿವೆ. ಪ್ರಸಿದ್ಧವಾದ ಒಂದು ವಾಕ್ಯವನ್ನು ಸ್ಮರಿಸಬಹುದು:

"ಪಶ್ಯೇಮ ಶರದಶ್ಶತಂ, ಜೀವೇಮ ಶರದಶ್ಶತಂ,
ನಂದಾಮ ಶರದಶ್ಶತಂ, ಮೋದಾಮ ಶರದಶ್ಶತಂ,
ಭವಾಮ ಶರದಶ್ಶತಗ್ಂ ಶೃಣವಾಮ ಶರದಶ್ಶತಂ,
ಪ್ರಬ್ರವಾಮ ಶರದಶ್ಶತಮಜೀತಾಸ್ಸ್ಯಾಮ ಶರದಶ್ಶತಮ್ ||"

—ತೈತ್ತಿರೀಯಾರಣ್ಯಕ, ೪–೪೨

## (೩) ಆತ್ಮದ್ರೋಹ

ಅಸುರೀ (ರಾಕ್ಷಸೀ) ಲೋಕಗಳು ಉಂಟಲ್ಲವೆ—ಕುರುಡು ಕತ್ತಲು ಕವಿದವು? ಯಾರು (ಈಶ್ವರನನ್ನು ಮರೆತು, ಎಂದರೆ ಈಶ್ವರಸ್ವರೂಪವಾದ) ಆತ್ಮವಸ್ತುವನ್ನು ಅಲ್ಲಗಳೆದು (ಲೋಕ ತಮ್ಮ ಸ್ವತ್ತೆನ್ನುವ ಅಜ್ಞಾನದಿಂದ) ನಡೆದುಕೊಳ್ಳುತ್ತಾರೋ ಅವರು ಆ ಅಸುರಲೋಕಗಳಿಗೆ ಹೋಗುತ್ತಾರೆ. (೩)

## (೪) ಆತ್ಮಸ್ವರೂಪ

ಆತ್ಮವು ಕದಲತಕ್ಕದ್ದಲ್ಲ; ಅದು ಏಕೈಕವಾದದ್ದು; ಅದು ಮನಸ್ಸಿಗಿಂತ ವೇಗವುಳ್ಳದ್ದು. ದೇವತೆಗಳು (ಎಂದರೆ ಇಂದ್ರಿಯಗಳು) ಪೂರ್ವದಲ್ಲಿ ಅದನ್ನು ಹುಡುಕಿ ಹುಡುಕಿ ಪಡೆಯಲಾರದೆಹೋದರು. ಅದು ನಿಶ್ಚಲವಾಗಿ ನಿಂತಿದ್ದರೂ ಅದನ್ನು ಹಿಡಿಯಬೇಕೆಂದು ಓಡುವವರ ಮುಂದುಗಡೆಯೇ ಅದು ಅವರ ಕೈಗೆ ಎಟುಕದಂತೆ ಇರುತ್ತದೆ. ಆ ಆತ್ಮವಸ್ತುವಿನ ಒಳಗಡೆ ಪ್ರಾಣವಾಯುವು ಇದ್ದುಕೊಂಡು ಲೋಕಕಾರ್ಯಗಳನ್ನು ನಡಸುತ್ತದೆ. (೪)

ಆತ್ಮವು ಕದಲುತ್ತದೆ, ಕದಲುವುದಿಲ್ಲ; ಅದು ದೂರದಲ್ಲಿದೆ, ಹತ್ತಿರವಾಗಿಯೇ ಇದೆ; ಅದು ಎಲ್ಲದರ ಒಳಗಡೆಯೂ ಇದೆ, ಈ ಎಲ್ಲದರ ಹೊರಗಡೆಯೂ ಅದೇ ಇದೆ. (೫)

## (೫) ಸರ್ವಾತ್ಮೈಕ್ಯ

ಯಾವನಾದರೆ ಸಮಸ್ತ ಪ್ರಾಣಿಗಳನ್ನೂ ತನ್ನ ಆತ್ಮದ ಒಳಗಡೆಯೇ ಕಾಣುತ್ತಾನೋ, ಮತ್ತು ತನ್ನ ಆತ್ಮವನ್ನೇ ಎಲ್ಲ ಪ್ರಾಣಿಗಳಲ್ಲೂ ಕಾಣುತ್ತಾನೋ, ಅವನು (ಆ ಪ್ರಾಣಿಸಮುದಾಯವಾದ) ಜಗತ್ತಿನ ವಿಷಯದಲ್ಲಿ ಬೇಸರಗೊಳ್ಳಲಾರನು. [ಏಕೆಂದರೆ ತಾನೂ ಅದೂ ಒಂದೇ ಅಖಂಡವಸ್ತು.] (೬)

ಯಾರು ಸಮಸ್ತ ಭೂತಗಳೂ ತಾನೇ ಎಂದು ತಿಳಿದಿರುತ್ತಾನೋ ಅಂಥಾ

ಐಕ್ಯಾನುಭವಿಯಲ್ಲಿ ಮೋಹಭ್ರಾಂತಿ ಎಲ್ಲಿಯದು? ಅವನಲ್ಲಿ ದುಃಖಕ್ಕೆಡೆ ಹೇಗಾದೀತು ? * (೭)

## (೬) ಈಶ್ವರನ ಜಗನ್ನಿಯಾಮಕತ್ವ

ಅದು (ಪರಮಾತ್ಮವಸ್ತುವು) ಎಲ್ಲವನ್ನೂ ಸುತ್ತು ಮುತ್ತಿಕೊಂಡಿದೆ. ಅದು ಸ್ವಚ್ಛವಾದದ್ದು ; ದೇಹವಿಲ್ಲದ್ದು ; ಕುಂದಿಲ್ಲದ್ದು ; ನರ ಮೊದಲಾದ ದೇಹತಂತು ಗಳಿಲ್ಲದ್ದು ; ನಿರ್ಮಲವಾದದ್ದು ; ಪಾಪದ ಬಾಧೆಯಿಲ್ಲದ್ದು. ಆ ಪರಮೇಶ್ವರನು ಕವಿ (ಕರುಣಾದಿ ರಸಭಾವಮಯನು ಮತ್ತು ಕಲ್ಪನಪ್ರತಿಭಾನಿಧಿ); ಮನೀಷಿ (ವಿವೇಚನಶೀಲನು ಮತ್ತು ಕಾರ್ಯಚತುರನು) ; ಎಲ್ಲೆಡೆಯೂ ಇರುವವನು ; ತನ್ನಿಂದ ತಾನೇ ಆದವನು (ಎಂದರೆ ಇನ್ನೊಬ್ಬರಿಂದ, ಇನ್ನೊಂದರಿಂದ, ಹುಟ್ಟಿ ಬಂದವನಲ್ಲ). ಈ ಜಗತ್ತು ಶಾಶ್ವತವಾಗಿ ನಡೆಯಲು ಯಾವಯಾವುದು ಹೇಗೆ ಹೇಗೆ ಇರಬೇಕೋ, ಹೇಗೆ ಹೇಗೆ ನಡೆಯಬೇಕೋ ಹಾಗೆ ಹಾಗೆ ಆಗುವಂತೆ [ದೇವತೆಗಳೆಂಬ ನಾನಾ ಪ್ರಕೃತಿಶಕ್ತಿಗಳು ತಮ್ಮ ತಮ್ಮ ಗೊತ್ತಾದ ಕಾರ್ಯ ಗಳನ್ನು ತಪ್ಪದೆ ನಡಸುತ್ತಿರುವಂತೆಯೂ ನಾನಾ ಜೀವಗಳು ತಮ್ಮ ತಮ್ಮ ಕರ್ಮಗಳ ಫಲಗಳನ್ನನುಭವಿಸುವಂತೆಯೂ] ಆ ಪರಮೇಶ್ವರನು ವಿಧಾಯಕ ಮಾಡಿದ್ದಾನೆ.† (೮)

## (೭) ಪ್ರವೃತ್ತಿ–ನಿವೃತ್ತಿ ಸಮನ್ವಯ

ಇಲ್ಲಿಂದ ಮುಂದಿನ ಮೂರು ಮಂತ್ರಗಳಲ್ಲಿ "ವಿದ್ಯೆ", "ಅವಿದ್ಯೆ" ಎಂಬ ಪದಗಳು ಸಂಕೇತಾರ್ಥದಲ್ಲಿ ಉಪಯುಕ್ತವಾಗಿವೆ, ಹೀಗೆ §—

| ವಿದ್ಯೆ | ಅವಿದ್ಯೆ |
|---|---|
| (ಆತ್ಮ) ಜ್ಞಾನ | (ಲೋಕ) ಕರ್ಮ |
| ಸಂನ್ಯಾಸ | ಸಂಸಾರ |
| ಅಂತರ್ಮುಖತ್ವ | ಬಹಿರ್ಮುಖತ್ವ |
| ನಿವೃತ್ತಿಧರ್ಮ | ಪ್ರವೃತ್ತಿಧರ್ಮ |

* "ಕಸ್ಮಾನ್ನು ಬಿಭೇಮಿ | . . . ದ್ವಿತೀಯಾದ್ವೈ ಭಯಂ ಭವತಿ |"—ಬೃಹದಾರಣ್ಯಕ, ೧—೪—೨

† "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ತಿಷ್ಠತಃ . . ."— ಬೃಹದಾರಣ್ಯಕ, ೩—೮—೯

§ "ಅವಿದ್ಯಾಂ=ವಿದ್ಯಾನ್ಯಾಂ, ಕೇವಲಂ ಕರ್ಮ ಇತ್ಯರ್ಥಃ | ವಿದ್ಯಾವಿಧುರಂ ಕರ್ಮ ಇತಿ ವಾ | ವಿದ್ಯಾಂ=ಸ್ವಾಧಿಕಾರೋಚಿತಕರ್ಮಪರಿತ್ಯಾಗರೂಪಾಂ, ಕರ್ಮವಿರಹಿತಾಮ್ |" (ಕೂರನಾರಾಯಣಭಾಷ್ಯ). ಅವಿದ್ಯಾ=ಕೇವಲ ಕರ್ಮ. ವಿದ್ಯಾ=ಕೇವಲ ಬ್ರಹ್ಮವಿದ್ಯಾ.

ಜೀವದ ಸದ್ಗತಿಗೆ ಎರಡೂ ಸಾಧಕಗಳು: ಅವೆರಡಕ್ಕೂ ವಿರೋಧವಿಲ್ಲ; ಆ ಎರಡರಲ್ಲಿ ಯಾವ ಒಂದನ್ನೂ ಅಲ್ಲಗಳೆಯತಕ್ಕದ್ದಲ್ಲ; ಒಂದೊಂದರಿಂದ ಒಂದೊಂದು ಪ್ರಯೋಜನ— ಎಂಬುದು ಈ ಪ್ರಕರಣದ ಉಪದೇಶ.

ಯಾರು (ಕೇವಲ ಐಹಿಕ ಪ್ರವೃತ್ತಿರೂಪವಾದ) ಅವಿದ್ಯೆಯನ್ನು, ಎಂದರೆ ತತ್ತ್ವಜ್ಞಾನವಿಲ್ಲದ ಕರ್ಮವನ್ನು, ಮಾತ್ರವೇ ಉಪಾಸನೆ ಮಾಡಿಕೊಂಡಿರುತ್ತಾರೋ ಅವರು ಕಗ್ಗತ್ತಲನ್ನು ಹೊಗುತ್ತಾರೆ. ಯಾರು (ಕೇವಲ ಸಾಂನ್ಯಾಸಿಕ ನಿವೃತ್ತಿರೂಪವಾದ) ವಿದ್ಯೆಯನ್ನು, ಎಂದರೆ ಕರ್ಮಾಚರಣೆ ಬಿಟ್ಟ ವಿರಕ್ತಿಮಾರ್ಗವನ್ನು, ಮಾತ್ರವೇ ಹಿಡಿದಿರುತ್ತಾರೋ ಅವರು ಇನ್ನೂ ಹೆಚ್ಚಿನದೆನಿಸುವ ಕತ್ತಲನ್ನು ಪ್ರವೇಶಿಸುತ್ತಾರೆ. (೯)

ವಿದ್ಯೆಯಿಂದ (ಎಂದರೆ ಸಂನ್ಯಾಸಾದಿ ನಿವೃತ್ತಿಧರ್ಮದಿಂದ) ಒಂದು ಫಲವುಂಟೆಂದೂ ಅವಿದ್ಯೆಯಿಂದ (ಎಂದರೆ ಲೌಕಿಕ ಕರ್ತವ್ಯಾದಿ ಪ್ರವೃತ್ತಿಧರ್ಮದಿಂದ) ಇನ್ನೊಂದು ಫಲವುಂಟೆಂದೂ ಪೂರ್ವಿಕರು ಹೇಳಿರುತ್ತಾರೆ. ನಮಗೆ ಈ ವಿಷಯವನ್ನು ವಿವರಿಸಿದ ಪ್ರಾಜ್ಞ (ಧೀರ)ರಿಂದ ಅದು ಹಾಗೆಂದು ನಾವು ಕೇಳಿದ್ದೇವೆ. (೧೦)

ಯಾರಾದರೆ ವಿದ್ಯೆ ಅವಿದ್ಯೆಗಳೆರಡನ್ನೂ ಒಟ್ಟುಗೂಡಿಸಿ (ಅವುಗಳ ಅನ್ಯೋನ್ಯ ಸಂಬಂಧವನ್ನು) ತಿಳಿದುಕೊಂಡಿರುತ್ತಾನೋ ಅವನು ಅವಿದ್ಯೆಯ ದ್ವಾರಾ, ಎಂದರೆ ಪ್ರವೃತ್ತಿಧರ್ಮವಾದ ಗೃಹಸ್ಥಾಶ್ರಮ ಸಂಸ್ಕಾರರೂಪದ ಕರ್ಮಮಾರ್ಗದಿಂದ, ಮೃತ್ಯುವನ್ನು—ಎಂದರೆ ಮರ್ತ್ಯವಾದ ಈ ಪ್ರಪಂಚದ ಮಾಯಾದ್ವಂದ್ವಗಳನ್ನು—ದಾಟಿ, ವಿದ್ಯೆಯ ದ್ವಾರಾ—ಎಂದರೆ ನಿವೃತ್ತಿಧರ್ಮವಾದ ವಿರಕ್ತಿ ಸಂಸ್ಕಾರರೂಪದ ಜ್ಞಾನಮಾರ್ಗದಿಂದ ಅಮೃತವನ್ನು—ಎಂದರೆ ನಾಶರಹಿತವಾದ ಪರಮಾತ್ಮವಸ್ತುವನ್ನು ಸೇರುತ್ತಾನೆ (ಮೋಕ್ಷ ಪಡೆಯುತ್ತಾನೆ).* (೧೧)

ಚತುರ್ವಿಧ ಪುರುಷಾರ್ಥಗಳಲ್ಲಿ ಮೋಕ್ಷವೆಂಬುದೇ ಸರ್ವಶ್ರೇಷ್ಠವಾದದ್ದು. ಅದಕ್ಕೆ ಬೇಕಾದದ್ದು ಆತ್ಮಜ್ಞಾನ ಅಥವಾ ಬ್ರಹ್ಮಜ್ಞಾನ. ಆ ಜ್ಞಾನವಾದರೋ ಮನುಷ್ಯನ

---

* "ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ
ನ ವರ್ಧತೇ ಕರ್ಮಣಾ ನೋ ಕನೀಯಾನ್ |
ತಸ್ಯೈವ ಸ್ಯಾತ್ ಪದವಿತ್ತಂ ವಿದಿತ್ವಾ
ನ ಲಿಪ್ಯತೇ ಕರ್ಮಣಾ ಪಾಪಕೇನ ||"
—ಬೃಹದಾರಣ್ಯಕ, ೨-೪-೨೩

ಅಂತರಂಗಶುದ್ಧಿಯ ಅನಂತರವೇ ಸಂಪಾದನೆಯಾಗತಕ್ಕದ್ದು. ಆದದ್ದರಿಂದ ಚಿತ್ತಶುದ್ಧಿಯೇ ಮೋಕ್ಷಾರ್ಥಿಗೆ ಇರಬೇಕಾದ ಪೂರ್ವಸಿದ್ಧತೆ.

ಸತ್ಕರ್ಮದಿಂದಲೇ ಚಿತ್ತಶುದ್ಧಿ. ಆ ಸತ್ಕರ್ಮಗಳು ಸಕಾಮಗಳಾಗಿಯಾದರೂ ಇರಬಹುದು, ನಿಷ್ಕಾಮಗಳಾಗಿಯಾದರೂ ಇರಬಹುದು. ನಿಷ್ಕಾಮ ಉತ್ತಮ. ಆದರೆ ಅದು ಸುಲಭವಲ್ಲ. ಬಹುಮಂದಿಗೆ ಅದು ಸಾಧ್ಯವಿರದು. ಅಂಥವರು ಯಾವ ಸತ್ಕರ್ಮವೂ ಇಲ್ಲದಿರುವುದಕ್ಕಿಂತ ಕಾಮ್ಯಕರ್ಮವನ್ನಾದರೂ ಮಾಡುವುದು ಮೇಲು. ಏಕೆಂದರೆ ಅದು ಕೂಡ ಮನಸ್ಸಿಗೆ ಒಂದಷ್ಟು ಒಳ್ಳೆಯ ಸಂಸ್ಕಾರವನ್ನು ಉಂಟುಮಾಡಬಲ್ಲದು.

ಕರ್ಮವೆಂದರೆಯೇ ಮನೋಬುದ್ಧಿಗಳ ಒಂದಾನೊಂದು ದೃಢಪ್ರಯತ್ನ. ಒಂದು ಗುರಿ, ಒಂದು ನಂಬಿಕೆ, ಒಂದು ಪಟ್ಟು, ಒಂದು ಅಭ್ಯಾಸ—ಇವು ಎಲ್ಲ ಕರ್ಮದಲ್ಲಿಯೂ ಇರುತ್ತವೆ.

ಸತ್ಕರ್ಮವಾದರೋ ನಮ್ಮ ಅಂತಃಕರಣವನ್ನು ನಮ್ಮ ಸಾಮಾನ್ಯಮಟ್ಟದಿಂದ ಮೇಲಕ್ಕೆತ್ತುತ್ತದೆ; ದೇವರೆಂಬ ಒಂದು ಮಹಾಶಕ್ತಿಯ ಕಡೆಗೆ ನಮ್ಮ ಗಮನವನ್ನು ತಿರುಗಿಸುತ್ತದೆ. ಹೀಗೆ ಮನಸ್ಸಿಗೆ ಒಂದು ಊರ್ಧ್ವಪ್ರವೃತ್ತಿ, ಒಂದು ಶ್ರದ್ಧೆ, ಒಂದು ನಿಷ್ಠೆ, ಒಂದು ಧೈರ್ಯ, ಒಂದು ಆಚಾರ ನಿಯಮ—ಇವು ಅಭ್ಯಾಸವಾಗುತ್ತವೆ. ಇಂಥ ಸದ್ವಾಸನೆಗಳು ನಮ್ಮ ಅಂತಃಕರಣದಲ್ಲಿ ಪ್ರಬಲಿಸಿದಂತೆಲ್ಲ ದುರ್ವಾಸನೆಗಳು ಕ್ಷೀಣಿಸುತ್ತವೆ.

ದೇವತಾಪೂಜೆ ಮೊದಲಾದ ಯಾವ ಸತ್ಕಾರ್ಯವನ್ನಾರಂಭಿಸುವಾಗಲೂ ಸಂಕಲ್ಪ ಮಾಡುವುದರಲ್ಲಿ "ದುರಿತಕ್ಷಯದ್ವಾರಾ ಶ್ರೀ ಪರಮೇಶ್ವರಪ್ರೀತ್ಯರ್ಥಂ" ಎಂದು ಹೇಳುವುದು ಸಂಪ್ರದಾಯ. ಪಾಪ ಸವೆಯುವುದು, ದೇವರು ಒಪ್ಪುವುದು—ಇವೆರಡು ಸತ್ಕರ್ಮದ ಉದ್ದೇಶಗಳು.

ಪುಣ್ಯಚಿಂತನೆಯಿಂದ ಪಾಪನಾಶ. ಪಾಪನಾಶನದಿಂದ ಅಂತರಂಗಶುದ್ಧಿ. ಅಂತರಂಗಶುದ್ಧಿಯಿಂದ ಆತ್ಮಜ್ಞಾನಾರ್ಹತೆ. ಆತ್ಮಜ್ಞಾನಪ್ರಾಪ್ತಿಯಿಂದ ಬ್ರಹ್ಮಸಿದ್ಧಿ.

ಹೀಗೆ ಕರ್ಮವು ಪರಂಪರೆಯಾಗಿ ಜ್ಞಾನಸಾಧಕವಾಗುತ್ತದೆ.

ಈ ಅಭಿಪ್ರಾಯವನ್ನು ಸ್ಮೃತಿಕಾರ ಶಿರೋಮಣಿಯಾದ ಮನುಮಹರ್ಷಿ ಪ್ರತಿಪಾದಿಸಿದ್ದಾನೆ—

"ಪ್ರವೃತ್ತಂ ಕರ್ಮ ಸಂಸೇವ್ಯ ದೇವಾನಾಮೇತಿ ಸಾಮ್ಯತಾಮ್ |
ನಿವೃತ್ತಂ ಸೇವಮಾನಸ್ತು ಭೂತಾನ್ಯತ್ಯೇತಿ ಪಂಚ ವೈ ||" ೧೨-೯೦

(ಪ್ರವೃತ್ತಿಧರ್ಮವನ್ನು ಚೆನ್ನಾಗಿ ನಡಸಿದವನು ದೇವತೆಗಳಿಗೆ ಸಮಾನನಾಗುತ್ತಾನೆ; ನಿವೃತ್ತಿಮಾರ್ಗದಲ್ಲಿ ಹೋಗುವವನು ಪಂಚಭೂತ (ದೇಹ) ಬಂಧನಗಳನ್ನು ದಾಟಿದವನಾಗುತ್ತಾನೆ.)

"ತಪಸಾ ಕಿಲ್ಬಿಷಂ ಹನ್ತಿ ವಿದ್ಯಯಾಮೃತಮಶ್ನುತೇ ||"

(ಕರ್ಮರೂಪವಾದ ತಪಸ್ಸಿನಿಂದ ಕಲ್ಮಷಗಳನ್ನು ತೊಳೆದುಕೊಂಡು ಜ್ಞಾನದಿಂದ ಮೋಕ್ಷವನ್ನೈದುತ್ತಾನೆ.)

" ಅನಧೀತ್ಯ ದ್ವಿಜೋ ವೇದಾನ್ ಅನುತ್ಪಾದ್ಯ ತಥಾ ಸುತಾನ್ |
ಅನಿಷ್ಟ್ವಾ ಚೈವ ಯಜ್ಞೈಶ್ಚ ಮೋಕ್ಷಮಿಚ್ಛನ್ವ್ರಜತ್ಯಧಃ || "

(ವೇದಾಧ್ಯಯನ ಮಾಡದೆ, ಗೃಹಸ್ಥನಾಗಿ ವಂಶವನ್ನಭಿವೃದ್ಧಿಪಡಿಸದೆ, ಯಜ್ಞಯಾಗಾದಿಗಳಿಂದ ದೇವತೆಗಳನ್ನು ಪೂಜಿಸದೆ—ಎಂದರೆ ದೇವರ್ಷಿಪಿತೃ ಋಣವೆಂಬ ಮೂರು ಸಾಲಗಳನ್ನು ತೀರಿಸದೆ- ಮೋಕ್ಷವನ್ನು ಬಯಸುವವನು ಅಧೋಗತಿಯನ್ನೈದುತ್ತಾನೆ.)

ಇಲ್ಲಿ ಮೂರಂಶಗಳು ನಮ್ಮ ನೆನಪಿನಲ್ಲಿರಬೇಕಾದವು :—

(೧) ಪ್ರವೃತ್ತಿಧರ್ಮಗಳು ಸಮಾಜ ಹಿತಾಪೇಕ್ಷಿತಗಳು ; ಆದದ್ದರಿಂದ ಕರ್ತವ್ಯಗಳು. ಭೂತಹಿತವು ಸರ್ವಕಾಲವೂ ಸರ್ವಪ್ರಯತ್ನದಿಂದಲೂ ಕರ್ತವ್ಯವಾದದ್ದು.

(೨) ಅವು ಮನೋಬುದ್ಧಿಗಳಿಗೆ ಸಂಸ್ಕಾರವನ್ನುಂಟುಮಾಡಿ ಕಾಮ ಕ್ರೋಧ ಲೋಭ ಮಾತ್ಸರ್ಯಾದಿಗಳನ್ನು ಸವೆಯಿಸಿ ಜೀವಪರಿಶುದ್ಧಿಗೆ ಸಹಾಯವಾಗತಕ್ಕವು. ಹೀಗೂ ಅವು ಕರ್ತವ್ಯಗಳು.

(೩) ಪ್ರವೃತ್ತಿಯು ಮನುಷ್ಯನಿಗೆ ಸ್ವಾಭಾವಿಕವಾದದ್ದು ; ಆದದ್ದರಿಂದ ಸುಲಭ. ನಿವೃತ್ತಿಯಾದರೋ ಸಂಸ್ಕಾರಜನ್ಯವಾದದ್ದು ; ಆದದ್ದರಿಂದ ಕಷ್ಟ.

" ಪ್ರವೃತ್ತಿರೇಷಾ ಭೂತಾನಾಮ್ | ನಿವೃತ್ತಿಸ್ತು ಮಹಾಫಲಾ ||"—ಮನು.

ಸುಲಭವಾದದ್ದರಿಂದ ಪ್ರಾರಂಭಮಾಡಿ ಕ್ರಮೇಣ ಕಷ್ಟವಾದದ್ದಕ್ಕೆ ಹತ್ತುವುದು ವಿದ್ಯಾಭ್ಯಾಸದಲ್ಲಿ ಕಾರ್ಯಕಾರಿಯಾಗುವ ಉಪಾಯ.

## (೮) ಸಂನ್ಯಾಸ—ಸಂಸಾರ

ಮೇಲೆ ಜ್ಞಾನ ಕರ್ಮಗಳ,—ಸಂನ್ಯಾಸ ಗಾರ್ಹಸ್ಥ್ಯಗಳ,—ನಿವೃತ್ತಿ ಪ್ರವೃತ್ತಿಗಳ ಆಪಾತ ವಿರೋಧವನ್ನು ಪರಿಹರಿಸಿ ಸಮನ್ವಯಮಾಡಿದ್ದಾಗಿದೆ. ಈಗ ಬ್ರಹ್ಮೋಪಾಸನೆ ಜಗದುಪಾಸನೆಗಳ,—ವಿರಕ್ತಜೀವನ ಸಾಮಾಜಿಕ ಜೀವನಗಳ,—ಅವಿರೋಧವನ್ನು ತೋರಿಸುವುದಾಗುತ್ತದೆ. ಇದನ್ನು ಮೇಲಣ ವಿಷಯದ ರೂಪಾಂತರ ಅಥವಾ ಪುರೋಧಾರೆಯೆಂದು ಹೇಳಬಹುದು. ಇಲ್ಲಿ " ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ " ಎಂಬ ಮೇಲಣ (೨ ನೆಯ) ಮಂತ್ರವು ಜ್ಞಾಪಕದಲ್ಲಿರಬೇಕಾದದ್ದು.

ಈ ಮುಂದಣ ಮೂರು ಮಂತ್ರಗಳಲ್ಲಿ ಸಂಭೂತಿ, ಸಂಭವ, ಅಸಂಭೂತಿ, ಅಸಂಭವ, ವಿನಾಶ—ಈ ಪದಗಳು ಪಾರಿಭಾಷಿಕ ಶಬ್ದಗಳಂತೆ ಉಪಯುಕ್ತವಾಗಿವೆ. ಅವುಗಳ ಅರ್ಥಗಳನ್ನು ಗಮನದಲ್ಲಿರಿಸಿಕೊಳ್ಳುವುದು ಆವಶ್ಯಕ. " ಸಂಭೂತಿ ", " ಸಂಭವ " ಎಂದರೆ ತಾನಾಗಿ ಇರುವಿಕೆ, ಆಗುವಿಕೆ (ಭೂ=ಸತ್ತಾಯಾಮ್) ; " ಸ್ವಯಂಭು " ; ಜಗತ್ತಿನ ಹುಟ್ಟಿಗೆ ಮೂಲ ಕಾರಣವಾದ ಬ್ರಹ್ಮವಸ್ತು. " ಅಸಂಭೂತಿ ", " ಅಸಂಭವ " ಎಂದರೆ ಆ ಬ್ರಹ್ಮದಿಂದ (ಹುಟ್ಟಿ) ಆಗಿದ್ದರೂ ಬೇರೆಯೆಂಬಂತೆ ತೋರುವ ಜಗತ್ತು." (ಜಗತ್ತು "ಸತ್ತಾ" ಉಳ್ಳದ್ದಲ್ಲ, ಆದದ್ದರಿಂದ " ಅಭೂಃ ", " ಅಭೂತ ", " ಅಸಂಭೂತ " " ಅಸಂಭವ ".)

"ವಿನಾಶ" ಎಂದರೆ ನಾಶಹೊಂದುವುದಾದ ಜಗತ್ತು. ಆ ಪದಗಳ ಪರ್ಯಾಯೋಪಯೋಗ ಹೀಗೆ * :—

| ಜಗತ್ಕಾರಣವಾದ ಬ್ರಹ್ಮ | ಬ್ರಹ್ಮೇತರವೆನಿಸುವ ಜಗತ್ತು |
|---|---|
| ಸಂಭೂತಿ | ಅಸಂಭೂತಿ |
| ಸಂಭವ | ಅಸಂಭವ |
| ಸಂಭೂತಿ | ವಿನಾಶ |
| ಸ್ವಯಂಭೂತ | ಅಸ್ವಯಂಭೂತ |
| ಸ್ವತಸ್ಸಿದ್ಧ | ಕೃತಕ, ಅನ್ಯಜನಿತ |
| ಈಶತ್ವ | ಜೀವತ್ವ |
| (ಚೈತನ್ಯ) | (ಜಡ) |
| (ವಸ್ತು) | (ಛಾಯೆ) |
| (ಸ್ವತಂತ್ರ) | (ಪರತಂತ್ರ) |
| (ಸತ್ಯ) | (ಮಾಯೆ) |

ಶಂಕರ ಭಗವತ್ಪಾದರವರು ಸಂಭೂತಿಯೆಂದರೆ ಸೃಷ್ಟಿಯಲ್ಲಿ ಪ್ರಥಮನಾದ ಹಿರಣ್ಯಗರ್ಭನೆಂಬ ಕಾರ್ಯಬ್ರಹ್ಮನೆಂದೂ ಅಸಂಭೂತಿಯೆಂದರೆ ಅವ್ಯಾಕೃತ (ಎಂದರೆ ಸ್ಪಷ್ಟವೂ ನಿಷ್ಕೃಷ್ಟವೂ ಆದ ಆಕಾರಗಳನ್ನು ಧರಿಸದೆ ಇರುವ) ಪ್ರಕೃತಿಯೆಂದೂ ಅರ್ಥಕೊಟ್ಟಿದ್ದಾರೆ. ಸಂಭೂತಿ ಅಸಂಭೂತಿಗಳು, ಮೇಲಣ ವಿದ್ಯೆ ಅವಿದ್ಯೆಗಳಂತೆ, ಪರಸ್ಪರ ವ್ಯತಿರಿಕ್ತಾರ್ಥಕಗಳೆಂದು ಭಾವಿಸುವುದು ಪ್ರಕರಣದೃಷ್ಟಿಯಿಂದ ಯುಕ್ತವಾಗಿದೆ. ಹಿರಣ್ಯಗರ್ಭನಿಗೂ ಅವ್ಯಾಕೃತವೆಂಬುದಕ್ಕೂ ಇರುವ ಭೇದವು ಸ್ಥಾನಗಣನೆಯದೇ ಹೊರತು ಜಾತಿಯದಲ್ಲ. ಜಾತಿಯಲ್ಲಿ ಎರಡೂ ಶುದ್ಧಬ್ರಹ್ಮದಿಂದ ಭಿನ್ನವಾದವೇ; ಅವೆರಡೂ ಅಣ್ಣತಂಗಿಯರಂತೆ ಇರುತ್ತವೆ, ವಿರೋಧಿಗಳಲ್ಲ. ಮತ್ತು ೧೪ ನೆಯ ಮಂತ್ರದ ಉತ್ತರಾರ್ಧವಾದ—

"ವಿನಾಶೇನ ಮೃತ್ಯುಂ ತೀರ್ತ್ವಾ ಸಂಭೂತ್ಯಾಽಮೃತಮಶ್ನುತೇ ||"

ಎಂಬ ಫಲಶ್ರುತಿವಾಕ್ಯದಿಂದ ಅದರ ಮೇಲಣ ೧೨, ೧೩, ೧೪ ನೆಯ ಮಂತ್ರಗಳಿಗೆ ಅರ್ಥ ಹೇಳಬೇಕಾಗಿದೆ. ಶಂಕರರು ತಮ್ಮ ಅರ್ಥಕ್ಕನುಕೂಲಿಸುವಂತೆ ಈ ಮಂತ್ರದಲ್ಲಿ ಮೊದಲನೆಯ ಪದವಾದ "ಸಂಭೂತಿ" ಎಂಬುದನ್ನು "ಅಸಂಭೂತಿ" ಎಂದು ಗ್ರಹಿಸಬೇಕೆಂದೂ,

---

* "ಸಂಭೂತಿಂ=ಸಮಾಧಿರೂಪ ಬ್ರಹ್ಮಾನುಭೂತಿಮ್ |
ವಿನಾಶಂ=ಯೋಗವಿರೋಧಿನಾಂ ವರ್ಜನಮ್ !"

—ಕೂರನಾರಾಯಣಭಾಷ್ಯ

ಸಂಭೂತಿ=ಸಮಾಧಿ. ಅಸಂಭೂತಿ=ನಿಷಿದ್ಧನಿವೃತ್ತಿ.
ಬ್ರಹ್ಮಪ್ರಾಪ್ತಿರೂಪಾ ಸಂಭೂತಿರುಕ್ತಾ |
ಅಸಂಭೂತಿಶಬ್ದಃ ತದಾಸನ್ನಪ್ರತಿಬಂಧವಿನಾಶಮಭಿಧತ್ತೇ |

"ಮೃತ್ಯುಂ ತೀರ್ತ್ವಾ ಸಂಭೂತ್ಯಾ" ಎಂಬುದರಲ್ಲಿ "ತೀರ್ತ್ವಾ + ಅಸಂಭೂತ್ಯಾ" ಎಂದು ಪದವಿಭಾಗ ಮಾಡಿಕೊಳ್ಳಬೇಕೆಂದೂ ಅಪ್ಪಣೆಕೊಟ್ಟಿದ್ದಾರೆ.

ಇಲ್ಲಿ ನಾವು ಮಾಡಿರುವ ಅರ್ಥವು ಬೇರೆ ಬಗೆಯದಾದರೂ ಅದು ತಾತ್ಪರ್ಯದಲ್ಲಿ ಶಂಕರರ ಅರ್ಥಕ್ಕೆ ವಿರುದ್ಧವಾಗಿಲ್ಲ. ಪ್ರಾಚೀನವಾದ ಉವಟಾಚಾರ್ಯಭಾಷ್ಯದಲ್ಲಿ ನಮ್ಮ ಅರ್ಥಕ್ಕೆ ಸಮರ್ಥನೆ ಕಾಣುತ್ತದೆ. ಅದರ ವಾಕ್ಯಗಳಿವು :—

"ಸಂಭೂತಿಂ ಚ—ಸಮಸ್ತಸ್ಯ ಜಗತಃ ಸಂಭವೈಕಹೇತುಂ ಚ—ಪರಂ ಬ್ರಹ್ಮ। ವಿನಾಶಂ ಚ—ವಿನಾಶಿ ಚ ಶರೀರಂ। ಯೋ ಯೋಗೀ ತದುಭಯಮೇವಂ ವೇದ—ಜಾನಾತಿ। ಸಹೈಕೀಭೂತಂ। ಶರೀರಗ್ರಹಣೇನ ಜ್ಞಾನೋತ್ಪತ್ತಿಹೇತೂನಿ ಕರ್ಮಾಣಿ ಕರೋತಿ। ಸ ವಿನಾಶೇನ ವಿನಾಶಿನಾ ಶರೀರೇಣ ಮೃತ್ಯುಂ ತೀರ್ತ್ವಾ—ಉತ್ತೀರ್ಯ। ಸಂಭೂತ್ಯಾ ಆತ್ಮಜ್ಞಾನೇನ ವಿಜ್ಞಾನೇನ। ಅಮೃತಮಶ್ನುತೇ—ಅಮೃತತ್ವಂ ಪ್ರಾಪ್ನೋತಿ॥"

ಉವಟಭಟ್ಟರು ಶರೀರ ಎಂದು ಕರೆದಿರುವುದನ್ನು ನಾವು ಇಲ್ಲಿ ಜಗತ್ತು ಎಂದು ಕರೆದಿದ್ದೇವೆ. ಶರೀರಕೋಟಿಯೇ ಜಗತ್ತು. ಶರೀರವೆಂಬುದು ವ್ಯಷ್ಟಿವಾಚಕ; ಜಗತ್ತು ಸಮಷ್ಟಿವಾಚಕ.

ಸತ್ಯಾನಂದಭಾಷ್ಯದಲ್ಲಿಯೂ ಹೀಗೆಯೇ ಅರ್ಥ : "ಸಗುಣಬ್ರಹ್ಮ ಜಗತಃ ಕಾರಣಂ ಸಂಭೂತಿರ್ವಾ। ಸಂಭವತಿ=ಕಾರ್ಯರೂಪೇಣಾವಿರ್ಭವತೀತಿ ಸಂಭೂತಿಃ। ಯಚ್ಚ ಕಾರ್ಯಂ ಜಗತ್ ತದಸಂಭೂತಿಃ ಅಕಾರಣಮ್॥"

ಛಾಂದೋಗ್ಯೋಪನಿಷತ್ತಿನ (೮-೧೩) "ಶ್ಯಾಮಾಚ್ಛಬಲಂ ಪ್ರಪದ್ಯೇ। ಶಬಲಾಚ್ಛ್ಯಾಮಂ ಪ್ರಪದ್ಯೇ।" ಇತ್ಯಾದಿ ವಾಕ್ಯಗಳನ್ನೂ ಸ್ಮರಿಸಬಹುದು. ಶ್ಯಾಮ=ರಹಸ್ಯತತ್ತ್ವ=ಪರಬ್ರಹ್ಮ. ಶಬಲ=ವಿವಿಧ ಜಗತ್ತು=ವಿರಾಟ್, ಈಶ್ವರ. ಶ್ಯಾಮ-ಶಬಲಗಳನ್ನು ಏಕಾಕಾರವಾಗಿ ನೋಡಬೇಕಾದದ್ದು ; ಬ್ರಹ್ಮ-ಜಗತ್ತುಗಳನ್ನು ಅಖಂಡಾಕಾರವಾಗಿ ಗ್ರಹಿಸಬೇಕಾದದ್ದು.

ಯಾರು (ಜಗತ್ಕಾರಣವಾದ ಬ್ರಹ್ಮವನ್ನು ಮರೆತು) ಅಸಂಭೂತಿಯನ್ನು—ಎಂದರೆ ಸ್ವತಂತ್ರ ಅಸ್ತಿತ್ವವಿಲ್ಲದ ಪ್ರಪಂಚವನ್ನು, ನಂಬಿಕೊಂಡಿರುತ್ತಾರೋ ಅವರು ಕುರುಡಾಗಿಸುವ ಕತ್ತಲನ್ನು ಹೊಗುತ್ತಾರೆ. ಯಾರು (ಬ್ರಹ್ಮಕಾರ್ಯವಾದ ಜಗತ್ತನ್ನು ತೊರೆದು) ಕೇವಲ ಬ್ರಹ್ಮವನ್ನು ಮಾತ್ರ ಹುಡುಕುತ್ತಾರೋ ಅವರು ಇನ್ನೂ ಹೆಚ್ಚಿನದೆನಿಸುವ ಕತ್ತಲನ್ನು ಸೇರುತ್ತಾರೆ (ಏಕೆಂದರೆ ಬ್ರಹ್ಮವಸ್ತುವು ಜಗತ್ತನ್ನು ಬಿಟ್ಟಿರುವುದಲ್ಲ). (೧೨)

ಸಂಭವದಿಂದ—ಎಂದರೆ ನಿಜವಾದ ಇರುವಿಕೆಯುಳ್ಳ ಬ್ರಹ್ಮದ ಉಪಾಸನೆಯಿಂದ—ಒಂದು ಪ್ರಯೋಜನವೆಂದೂ, ಅಸಂಭವದಿಂದ—ಎಂದರೆ ನಿಜವಾದ ಇರುವಿಕೆಯಿಲ್ಲದೆ ಛಾಯಾಪ್ರಾಯವಾದ ಜಗತ್ತಿನ ಆರಾಧನೆಯಿಂದ—ಬೇರೊಂದು ಪ್ರಯೋಜನವೆಂದೂ ಪೂರ್ವಾಚಾರ್ಯರು ಹೇಳಿರುತ್ತಾರೆ. ನಮಗೆ ಈ ವಿಷಯವನ್ನು ತಿಳಿಯಹೇಳಿದ ಧೀರ (ಪ್ರಾಜ್ಞ) ರಿಂದ ಅದು ಹಾಗೆಂದು ನಾವು ಕೇಳಿದ್ದೇವೆ. (೧೩)

ಧೀರರು (ಧೀ=) ಎಂದರೆ ಬುದ್ಧಿಸಾಹಸದಿಂದ ಮುನ್ನುಗ್ಗುವವರು ಅಥವಾ ಬುದ್ಧಿಶಕ್ತಿಯಿಂದ ಮಾತನಾಡುವವರು.

ಯಾರಾದರೆ ಸಂಭೂತಿ (ಬ್ರಹ್ಮ), ವಿನಾಶ (ಜಗತ್ತು) ಗಳೆರಡನ್ನೂ ಒಟ್ಟುಗೂಡಿಸಿ (ಅವುಗಳ ಅನ್ಯೋನ್ಯ ಸಂಬಂಧವನ್ನು ನೋಡಿರುತ್ತಾನೋ ಅವನು ವಿನಾಶದ ಎಂದರೆ ಜಗಜ್ಜೀವನದ ಮೂಲಕ, ಅರ್ಥಾತ್ ಲೋಕಸಂಪರ್ಕ ಸಂಸ್ಕಾರದಿಂದ—ಮೃತ್ಯುವನ್ನು, ಎಂದರೆ ಜಗನ್ಮಾಯೆಯನ್ನು, ದಾಟಿ, ಸಂಭೂತಿಯಿಂದ—ಎಂದರೆ ಬ್ರಹ್ಮಸ್ವರೂಪದರ್ಶನದಿಂದ ಅಮೃತವನ್ನು, ಎಂದರೆ ನಾಶರಹಿತವಾದ ಆ ಪರಮಾತ್ಮವಸ್ತುವನ್ನು, ಸೇರುತ್ತಾನೆ. (೧೪)

## (೯) ಪರಮಾತ್ಮಪ್ರತಿನಿಧಿ ಸೂರ್ಯ

ಇಲ್ಲಿಯ ವರೆಗೂ ಆತ್ಮತತ್ತ್ವವನ್ನು ಕುರಿತು ಹೇಳಿದ್ದಾಯಿತು. ಆದರೆ ಆತ್ಮವು ನಿರಾಕಾರವಸ್ತು, ಲೋಕದಲ್ಲಿ ಕಾಣಬಾರದ್ದು. ಆದದ್ದರಿಂದ ಅದನ್ನು ಗ್ರಹಿಸುವುದು ಸಾಮಾನ್ಯಬುದ್ಧಿಗೆ ಕಷ್ಟ. ಮಂದಾಧಿಕಾರಿಗಳಿಗೆ ಆ ಗಹನವಿಷಯವನ್ನು ಮನದಟ್ಟುವಂತೆ ಹೇಳುವುದಕ್ಕಾಗಿ ಉಪನಿಷನ್ಮಹರ್ಷಿಯು ಈಗ ಎಲ್ಲರಿಗೂ ತಿಳಿದಿರುವ ಪ್ರತ್ಯಕ್ಷವಸ್ತುಗಳೆರಡನ್ನು ಆತ್ಮಚೈತನ್ಯದ ಪ್ರತಿನಿಧಿಯಾಗಿ ಉದಾಹರಿಸುತ್ತಾನೆ. ಸೂರ್ಯನೂ ಅಗ್ನಿಯೂ ಆ ಪ್ರಸಿದ್ಧ ವಸ್ತುಗಳು; ಅವು ಸ್ಥೂಲವಾಗಿ ಎಲ್ಲ ಜನರಿಗೂ ಗೋಚರವಾಗಿರುವವು. ಅವುಗಳೊಳಗಿನ ಜ್ಯೋತಿಯು ಪರಬ್ರಹ್ಮಮಹಿಮೆಯ ಒಂದಂಶ. ಆ ಜ್ಯೋತಿಯೂ ಮನುಷ್ಯನ ಅಂತರಾತ್ಮದೊಳಗಿನ ದೃಷ್ಟಿಶಕ್ತಿರೂಪವಾದ ಚಿದಂಶವೂ ಒಂದೇ ವಸ್ತು. ಆದದ್ದರಿಂದ ಸೂರ್ಯ ಅಗ್ನಿಗಳ ತೇಜಸ್ಸಿನ ಮೂಲಕ ಆತ್ಮಸ್ವರೂಪವನ್ನು ಮನಸ್ಸಿಗೆ ತಂದುಕೊಳ್ಳುವುದು ನಮಗೆ ನಿರಾಕಾರ ಬ್ರಹ್ಮಧ್ಯಾನಕ್ಕಿಂತ ಸುಲಭ. ಹೀಗೆ ಸೂರ್ಯಾಗ್ನಿಪ್ರಾರ್ಥನೆ ಇಲ್ಲಿ ಪ್ರಸಕ್ತವಾಗಿದೆ.

ಓ ಪೋಷಕನಾದ ಸೂರ್ಯನೇ, ಸತ್ಯದ ಮುಖವನ್ನು ನಿನ್ನ ಬಿಂಬದ ಚಿನ್ನದ ತಟ್ಟೆ ಮುಚ್ಚಿದೆ. ಸತ್ಯಧರ್ಮಾಪೇಕ್ಷಿಯಾದ ನನ್ನ ಕಣ್ಣಿಗೆ ಸತ್ಯ ಕಾಣುವಂತೆ ಆ ತಟ್ಟೆಯನ್ನು ನೀನು ತೆಗೆದುಹಾಕು. (೧೫)

ಓ ಪೋಷಕನೆ, ಓ ಏಕಸಂಚಾರಿಯೆ, ನೀನೇ ಯಮ, ನೀನೇ ಸೂರ್ಯ, ನೀನೇ ಪ್ರಜಾಪತಿಬ್ರಹ್ಮನ ಪುತ್ರನು. ನಿನ್ನ ಕಿರಣಗಳನ್ನು ತೆಗೆ, ಹಿಂತೆಗೆದುಕೊಂಡು ಮರಳಿ ಜೋಡಿಸು; ಆಗ ನಿನ್ನ ಪರಮ ಮಂಗಳಕರವಾದ ಮೂಲರೂಪದ ತೇಜಸ್ಸನ್ನು ನಾನು ಕಂಡೇನು. ಆ ಸೂರ್ಯಮಂಡಲದಲ್ಲಿ ಅಂತರ್ಗತನಾಗಿರುವ ಪುರುಷನು (ಎಂದರೆ ಪರಮಾತ್ಮಚೈತನ್ಯವು) ಯಾವುದುಂಟೋ ಅದೇ ನಾನು. [ಎಂದರೆ ಸೂರ್ಯನೊಳಗಿರುವ ಸತ್ತ್ವವೂ ನನ್ನೊಳಗಣ ಆತ್ಮವೂ ಎರಡೂ ಒಂದೇ.] (೧೬)

"ಸ ಯಶ್ಚಾಯಂ ಪುರುಷೇ | ಯಶ್ಚಾಸಾವಾದಿತ್ಯೇ |
ಸ ಏಕಃ |"—ತೈತ್ತಿರೀಯೋಪನಿಷತ್ತು, ೩–೧೦

## (೧೦) ಕರ್ಮಸ್ಮೃತಿ

ಈ ಮುಂದಿನ ಮಂತ್ರಗಳಲ್ಲಿ ಕರ್ಮಫಲವಿಧಿಯು ಸೂಚಿತವಾಗಿದೆ. ಇಲ್ಲಿ ಮೇಲಣ ೨ ನೆಯ ("ನ ಕರ್ಮ ಲಿಪ್ಯತೇ") ಮಂತ್ರವನ್ನೂ ೮ ನೆಯದನ್ನೂ ("ಯಾಥಾತಥ್ಯತೋಽರ್ಥಾನ್") ೧೫ ನೆಯದನ್ನೂ ("ಸತ್ಯಧರ್ಮಾಯ") ಸೇರಿಸಿ ಅನ್ವಯಿಸಿಕೊಳ್ಳಬೇಕು. 'ಮಾಡಿದ್ದುಣ್ಣೋ ಮಹಾರಾಯ." ವಿಧಿ ಹಾಗಿರುವುದರಿಂದ ಕೆಲಸ ಮಾಡುವಾಗ ವಿವೇಕವಿರಲಿ ; ವಿವೇಕವನ್ನು ಜ್ಯೋತಿಸ್ಸ್ವರೂಪರಾದ ಸೂರ್ಯಾಗ್ನಿಗಳು ನಮಗೆ ಅನುಗ್ರಹಿಸಲಿ—ಎಂಬುದು ತಾತ್ಪರ್ಯ. ಇದು ಅವಸಾನಕಾಲವನ್ನು ಗಮನದಲ್ಲಿರಿಸಿಕೊಂಡು ಮಾಡಿದ ಪ್ರಾರ್ಥನೆ.

ಈ ನನ್ನ ದೇಹದಲ್ಲಿರುವ ಪ್ರಾಣವಾಯುವು ಪಂಚಮಹಾಭೂತಗಳಲ್ಲೊಂದಾದ ಶಾಶ್ವತವಾದ ವಿಶ್ವವಾಯುವನ್ನು ಸೇರಲಿ. ಈ ದೇಹವು ಬೂದಿಯಾಗಿ ಭೂಮಿಯನ್ನು ಸೇರಲಿ. ಓಮ್ ಬ್ರಹ್ಮವೆ, ನಿನಗೆ ನಮಸ್ಕಾರ. ನನ್ನಿಂದ ನಾನಾಕಾರ್ಯಗಳನ್ನು ಮಾಡಿಸಿದ, ಮನೋಬುದ್ಧಿರೂಪವಾದ ಓ ನನ್ನ ಅಂತರಂಗವೆ, ಸ್ಮರಿಸಿಕೋ ; ನಿನ್ನ ಕೃತ್ಯಾಕೃತ್ಯಗಳನ್ನು ಸ್ಮರಿಸಿಕೋ [ಎಂದರೆ ಪಾಪಕ್ಕಾಗಿ ಪಶ್ಚಾತ್ತಾಪಪಡು ; ಪುಣ್ಯಕ್ಕಾಗಿ ಪರಮಾತ್ಮಧ್ಯಾನ ಮಾಡು]. * (೧೭)

ಓ ಅಗ್ನಿದೇವನೇ, ನಾವು ಮಾಡಿದ ಕಾರ್ಯಾಕಾರ್ಯಗಳೆಲ್ಲವನ್ನೂ ತಿಳಿದವನು ನೀನು. ನಮ್ಮನ್ನು ಸಂಪತ್ಕರವಾದ ಸನ್ಮಾರ್ಗದಲ್ಲಿ ಕರೆದುಕೊಂಡು ಹೋಗು. ನಮ್ಮನ್ನು ವಂಚಿಸುವ ಪಾಪಗಳನ್ನು ಹೋಗಲಾಡಿಸು. ನಿನಗೆ ನಾವು ಪುನಃ ಪುನಃ ಬಹುವಾಗಿ ನಮಸ್ಕಾರಗಳನ್ನು ಸಲ್ಲಿಸುತ್ತೇವೆ. (೧೮)

---

* "ಅಥ ಖಲು ಕ್ರತುಮಯಃ ಪುರುಷಃ | ಪುರುಷೋ ಯಥಾ ಕ್ರತುರಸ್ಮಿಂಲ್ಲೋಕೇ ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ!"

—ಛಾಂದೋಗ್ಯೋಪನಿಷತ್ತು, ೩-೧೪-೧

# ಈಶೋಪನಿಷತ್

## ಶಾಂತಿಪಾಠ

ಹರಿಃ ಓಮ್

ಪೂರ್ಣಮದಃ ಪೂರ್ಣಮಿದಂ ।
ಪೂರ್ಣಾತ್ ಪೂರ್ಣಮುದಚ್ಯತೇ ॥
ಪೂರ್ಣಸ್ಯ ಪೂರ್ಣಮಾದಾಯ ।
ಪೂರ್ಣಮೇವಾವಶಿಷ್ಯತೇ ॥

ಓಂ ಶಾಂತಿಶ್ಶಾಂತಿಶ್ಶಾಂತಿಃ

"ಓಮ್" ಎಂಬುದು ಪರಬ್ರಹ್ಮದ ಅಥವಾ ದೇವರ ಹೆಸರು. ಅದನ್ನು ಎಲ್ಲ ವೈದಿಕ ಮತಗಳೂ ಅಂಗೀಕರಿಸಿವೆ. ಅದು ಪರಮಪವಿತ್ರವಾದ ತತ್ತ್ವದ ಜ್ಞಾಪಕಪದವೆಂದು ಬೌದ್ಧರು ಸಹ ಅಂಗೀಕರಿಸಿಕೊಂಡಿದ್ದಾರೆ.

ಪೂರ್ಣ=ಸಂಪೂರ್ಣ. ಏನೇನು ಬೇಕೋ ಅದೆಲ್ಲ ಇರುವ ಸ್ಥಿತಿ, ಕೊರತೆಯಿಲ್ಲದ್ದು. ಅದಃ=ಅದು. ಇದಂ=ಇದು. ಉದಚ್ಯತೇ=ಹೊರಟುಬಂದಿದೆ. ಅವಶಿಷ್ಯತೇ=ಉಳಿದು ಕೊಳ್ಳುತ್ತದೆ.

# ಈಶೋಪನಿಷತ್ತು

## ಶಾಂತಿಪಾಠ

### ಹರಿಯೊ, ಓಮ್

ಪೂರ್ಣವದು ತಾಂ ಬ್ರಹ್ಮ ತಾಂ ಪೂರ್ಣವಿದು ವಿಶ್ವ ।
ಪೂರ್ಣವಾದದರಿನಿದು ಪೂರ್ಣಮುದಿಸಿಹುದು ॥
ಪೂರ್ಣದಿನ್ ಅದೃಶ್ಯದಿಂ ದೃಶ್ಯ ಪೂರ್ಣವ ಕಳೆಯೆ ।
ಪೂರ್ಣವೇ ಮಿಗುವುದದು ಕುಂದುವಡದೆಂದುಂ ॥

ಓಂ ಶಾಂತಿ, ಶಾಂತಿ, ಶಾಂತಿ

ಅದೃಶ್ಯ=ಕಣ್ಣಿಗೆ ಕಾಣಬಾರದ್ದು (ಬ್ರಹ್ಮ). ದೃಶ್ಯ=ಕಾಣಬರುವುದು (ಲೋಕ). ತಾತ್ಪರ್ಯಸಂಗ್ರಹವನ್ನು ನೋಡಿರಿ, ಪುಟ ೨೪.

# ಉಪನಿಷತ್ತು

## (೧) ಈಶಾವಾಸ್ಯ

ಈಶಾವಾಸ್ಯಮಿದಗ್ಂ ಸರ್ವಂ ।
ಯತ್ಕಿಂಚ ಜಗತ್ಯಾಂ ಜಗತ್ ॥
ತೇನ ತ್ಯಕ್ತೇನ ಭುಂಜೀಥಾಃ ।
ಮಾ ಗೃಧಃ ಕಸ್ಯ ಸ್ವಿತ್ ಧನಂ ॥ ೧ ॥

ಈ ಮಂತ್ರಕ್ಕೆ ಎರಡು ರೀತಿ ಅರ್ಥಮಾಡಬಹುದು. ಎರಡೂ ಸ್ವಾರಸ್ಯವುಳ್ಳ ಅರ್ಥಗಳು, ಮತ್ತು ಪರಸ್ಪರ ವಿರೋಧವಿಲ್ಲದೆ ಹೊಂದಿಕೊಳ್ಳತಕ್ಕವು. ಮಂತ್ರವು ಮನನಾರ್ಹವಾದ ವಾಕ್ಯ. ಮನನದಲ್ಲಿ ಒಳ್ಳೊಳ್ಳೆಯ ಭಾವಗಳು ಎಷ್ಟೆಷ್ಟು ಹೆಚ್ಚಾಗಿ ಮನಸ್ಸಿಗೆ ಹೊಳೆದರೂ ಅಷ್ಟಷ್ಟು ಲಾಭ. ಆದದ್ದರಿಂದ ಇಲ್ಲಿಯ ಎರಡರ್ಥಗಳೂ ನಮಗೆ ಗ್ರಾಹ್ಯಗಳೇ.

ಈಶಾವಾಸ್ಯ: (೧) ಈಶಾ+ವಾಸ್ಯ=ಈಶ್ವರನಿಂದ ಆಚ್ಛಾದಿಸಲ್ಪಟ್ಟಿರುವುದು. (೨) ಈಶ+ಆವಾಸ್ಯ=ಈಶ್ವರನಿಂದ ವಾಸಮಾಡಲ್ಪಟ್ಟಿರುವುದು. ಜಗತ್=ನಡೆಯುವುದು, ಅಲುಗಾಡುವುದು, ಚಲಿಸುವುದು. ಮಾ=ಬೇಡ. ಗೃಧಃ=ಆಶಿಪಡು [ಇಂಗ್ಲಿಷಿನ Greed (ಗ್ರೀಡ್)]. ಧನ=ಹಣ, ಒಡವೆ. ತೇನ=(೧) ಈಶ್ವರನಿಂದ, (೨) ಜಗತ್ತಿನಿಂದ, ತ್ಯಕ್ತೇನ=(೧) (ಈಶ್ವರನು) ಕೊಟ್ಟದ್ದರಿಂದ, (೨) (ನೀನು) ತ್ಯಜಿಸಿದ್ದರಿಂದ.

ಈಶ್ವರನಿಗೆ ಜಗತ್ತು ಮನೆ. ಜಗತ್ತಿಗೆ ಈಶ್ವರನು ಮನೆ.* ಈಶ್ವರನು ಅಂತರ್ಯಾಮಿಯೂ ಹೌದು, ಆವರಣವೂ ಹೌದು. ಇದನ್ನೇ ಬೇರೆ ಕಡೆ "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" ಎಂದು ವರ್ಣಿಸಿದೆ.

## (೨) ಜಿಜೀವಿಷೇತ್

ಕುರ್ವನ್ನೇವೇಹ ಕರ್ಮಾಣಿ ।
ಜಿಜೀವಿಷೇಚ್ಛತಗ್ಂ ಸಮಾಃ ॥
ಏವಂ ತ್ವಯಿ ನಾನ್ಯಥೇತೋಽಸ್ತಿ ।
ನ ಕರ್ಮ ಲಿಪ್ಯತೇ ನರೇ ॥ ೨ ॥

ಕುರ್ವನ್+ಏವ+ಇಹ=ಇಲ್ಲಿ ಮಾಡಿಕೊಂಡೇ. ಜಿಜೀವಿಷೇತ್=ಜೀವಿಸಲಿಚ್ಛೆಪಡಬೇಕು. ಸಮಾಃ=ವರ್ಷಗಳು. ಏವಂ=ಹೀಗೆ. ನಾನ್ಯಥಾ=ಬೇರೆಯಿಲ್ಲ. ನ ಲಿಪ್ಯತೇ=ಮೆತ್ತಿಕೊಳ್ಳುವುದಿಲ್ಲ.

---

* "Allah, unto whom belongeth whatever is in the heavens and whatever *is in the* earth. . . ." (*Koran*, Surah XIV, Tr. PICKTHALL)

## ಉಪನಿಷತ್ತು

### (೧) ಈಶ್ವರನ ಮನೆ

ಈಶನಾವರಿಸಿರ್ಪನೀ ಜಗವನೆಲ್ಲವನು |
ಏಸಾನುಮಿದರೊಳಲುಗುವುದೆಲ್ಲಮವನೊಳ್ ||
ತ್ಯಜಿಸಿ ನೀಂ ಜಗವನ್ ಆ ತ್ಯಾಗದೊಳೆ ಸೊಗವನುಣು |
ನಿಜದಿ ಧನವಾರದೊಂದನುಮನೆಳಸದಿರು ||೧||

ಧನವು + ಆರದು ? + ಒಂದನುಮನ್ + ಎಳಸದಿರು (ಬಯಸಬೇಡ).

ಈಶ್ವರನ ಮನೆಯೊ ಇದು ಕಣ್ಗೆ ಕಾಣಿಪುದೆಲ್ಲ |
ವಿಶ್ವದಲಿ ಸುಳಿವಣಮುಮಾತನ ನಿವಾಸಂ ||
ತ್ಯಜಿಸಿ ನೀನಿದನ್ ಆತನ್ ಏನನೀವನೊ ಅದನು |
ಭುಜಿಸು ಬಯಸದಿರ್ ಆರ ಪುರುಳನುಮನ್ ಎಂದುಂ || ೧ ||

"ತ್ಯಜಿಸಿ ಭುಜಿಸು." ಅನ್ಯರಿಗೋಸ್ಕರ ತಾನು ತ್ಯಾಗಮಾಡಿ ಅನ್ಯರಿಗಾದ ಸಂತೋಷವನ್ನು ಅದು ತನ್ನದೆಂಬಂತೆ ಸಂತೋಷಿಸುವುದು ಆತ್ಮಜ್ಞಾನಿಯ ದಾರಿ. ತಿರುಪೆಯಿಂದ ಬದುಕುವ ತಾಯಿ ತಾನು ಹಸಿದಿದ್ದರೂ ಒಂದು ತುತ್ತು ಅನ್ನ ಸಿಕ್ಕಿದಾಗ ಅದನ್ನು ತನ್ನ ಮಗುವಿಗೆ ತಿನ್ನಿಸಿ ತಾನೇ ಉಂಡಿದ್ದಿದ್ದರೆ ಹೇಗೋ ಹಾಗೆ ತೃಪ್ತಿಪಡುತ್ತಾಳೆ; ಒಂದು ಬಟ್ಟೆ ಸಿಕ್ಕಿದರೆ ಅದನ್ನು ಮಗುವಿಗೆ ಹೊದ್ದಿಸಿ ತಾನೇ ಹೊದ್ದುಕೊಂಡಿದ್ದಿದ್ದರೆ ಹೇಗೋ ಹಾಗೆ ಸುಖವನ್ನನುಭವಿಸುತ್ತಾಳೆ. ಪತಿವ್ರತೆಯೂ ಹಾಗೆಯೇ ತನ್ನ ಪತಿಯ ವಿಷಯದಲ್ಲಿ.

### (೨) ಬದುಕಬೇಕಾದದ್ದು

ಇತ್ತಲಿಹ ಕರ್ತವ್ಯಗಳನು ನೀನೆಸಗುತ್ತೆ |
ವತ್ಸರಶತಂಬರಂ ಬಾಳ್ದಿರಲ್ ಬಯಸು ||
ಅಂತೀಶನಿಷ್ಠೆಯಲಿ ನೀನೆಸಗೆ ಮಾನುಷವನ್ |
ಅಂಟದಘ ನಿನಗೆ ಹಿತಗತಿ ಬೇರೆಯಿರದು ||೨||

ವತ್ಸರ=ವರ್ಷ. ಅಂತು + ಈಶನಿಷ್ಠೆ ಅಘ = ಪಾಪ.

ಈಶನಿಷ್ಠೆಯಿಂದ ಕರ್ತವ್ಯಾಚರಣೆ, ಸ್ವಾರ್ಥಬುದ್ಧಿಯಿಂದಲ್ಲ. "ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ." ತಾತ್ಪರ್ಯಸಂಗ್ರಹವನ್ನು ನೋಡಿರಿ, ಪುಟ [illegible]

(೩) ಆತ್ಮಘಾತುಕ

ಅಸುರ್ಯಾ ನಾಮ ತೇ ಲೋಕಾ
ಅಂಧೇನ ತಮಸಾ ವೃತಾಃ ॥
ತಾಗ್ಂಸ್ತೇ ಪ್ರೇತ್ಯಾಭಿಗಚ್ಛಂತಿ
ಯೇ ಕೇ ಚಾತ್ಮಹನೋ ಜನಾಃ ॥೩॥

ಅಸುರ್ಯಾ=ಅಸುರ (ರಾಕ್ಷಸ) ಸಂಬಂಧವಾದ. ಅಂಧೇನ=ಕುರುಡುಮಾಡುವ. ತಮಸಾ=ಕತ್ತಲೆಯಿಂದ. ವೃತಾಃ=ಸುತ್ತಲ್ಪಟ್ಟವರು. ಪ್ರೇತ್ಯ=(ಇಲ್ಲಿಂದ) ಹೊರಟು. ಅಭಿಗಚ್ಛಂತಿ=(ಕುರಿತು) ಹೋಗುತ್ತಾರೆ ಯೇ ಕೇ=ಯಾರೋ ಅಂಥಾ. ಆತ್ಮಹಾ= ಆತ್ಮವನ್ನು ಕೊಂದವರು, ಕೊಂದಹಾಗೆ ನಡೆದವರು, ಹಾನಿಮಾಡಿದವರು.

(೪) ಆತ್ಮಸ್ವರೂಪ

ಅನೇಜದೇಕಂ ಮನಸೋ ಜವೀಯೋ
ನ್ನೈನದ್ದೇವಾ ಆಪ್ನುವನ್ ಪೂರ್ವಮರ್ಷತ್ ॥
ತದ್ಧಾವತೋಽನ್ಯಾನತ್ಯೇತಿ ತಿಷ್ಠತ್
ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥೪॥

ಏಜತಿ=ಅದಿರುತ್ತದೆ, ಅಲುಗುತ್ತದೆ. ಜವ=ವೇಗ ದೇವಾಃ=ಇಂದ್ರಿಯ ಶಕ್ತಿಗಳು ಆಪ್ನುವನ್=ಪಡೆದವು. ಅರ್ಷತ್=ಹುಡುಕಿಕೊಂಡು ಹೋದವು. ಧಾವತಃ=ಓಡುತ್ತಿರುವ. ಅತ್ಯೇತಿ=ದಾಟಿ ಮುಂದಿರುತ್ತದೆ.

ತಿಷ್ಠತ್=ಕೂತುಕೊಂಡು. ಅಪಃ=ಕಾರ್ಯಗಳನ್ನು. (ವೈದಿಕ ಕರ್ಮಗಳಿಗೆಲ್ಲ "ಅಪ್ಪು"=ನೀರು ಅವಶ್ಯವಾದದ್ದು. ಹಾಗೆ ಎಲ್ಲ ಕರ್ಮಗಳಿಗೂ "ಅಪ್" ಶಬ್ದವು ಅನ್ವಯವಾಗ ಬಂತು.) ಮಾತರಿಶ್ವಾ=ವಾಯುದೇವನು (ಆಕಾಶದಿಂದುಸಿರುವವನು.) ದಧಾತಿ=ಏರ್ಪಡಿಸುತ್ತಾನೆ.

ತದೇಜತಿ ತನ್ನೈಜತಿ ।
ತದ್ದೂರೇ ತದ್ವಂತಿಕೇ ॥
ತದಂತರಸ್ಯ ಸರ್ವಸ್ಯ ।
ತದು ಸರ್ವಸ್ಯಾಸ್ಯ ಬಾಹ್ಯತಃ ॥೫॥

ಏಜ = ಅಲುಗು, ಕಂಪಿಸು. ತತ್ + ಉ + ಅಂತಿಕೇ = ತದ್ವಂತಿಕೇ = ಅದು ಸಮೀಪದಲ್ಲಿಯೇ.

(೩) ರಾಕ್ಷಸ ಗತಿ

ಆರ್ ಆತ್ಮವನ್ ಉಪೇಕ್ಷಿಪರೊ ಕೊಂದರವರು ।
ಧಾರುಣಿಯಿನಾ ಜನರ್ ತೆರಳಿದಾ ಬಳಿಕ ॥
ಸೇರುವರು ಕುರುಡು ಕತ್ತಲೆ ತುಂಬಿಕೊಂಡಿರುವ ।
ಘೋರಾಸುರರ್ಗೆ ಸಲಲಿರುವ ಲೋಕಗಳ ॥ ೩ ॥

ಯಾರು ಲೋಕವೈಭವಗಳೂ ದೇಹಭೋಗಗಳೂ ಆತ್ಮವಸ್ತುವಿಗಿಂತ ದೊಡ್ಡವೆಂದು ನಂಬಿಕೊಂಡಿರುತ್ತಾರೋ ಅವರೇ ಆತ್ಮಘಾತುಕರು. ಅವರಿಗೆ ಸಿದ್ಧವಿರುವುದು ಅಧೋಗತಿ—ನೀಚಜನ್ಮ.

ಆತ್ಮಹನನವೇ ಅಸುರಲಕ್ಷಣ. ಆತ್ಮಹನನವೆಂದರೆ ದೇಹ ಶಾಶ್ವತವೆಂದೂ ಅದೇ ದೊಡ್ಡದೆಂದೂ ಅದರ ಸುಖಸಂತೋಷಗಳೇ ಪರಮಾರ್ಥವೆಂದೂ ನಂಬಿ, ಜೀವದಲ್ಲಿ ಅಂತರ್ಗತವಾಗಿರುವ ಆತ್ಮವಸ್ತುವನ್ನು ಮರೆಯುವುದು—ಆತ್ಮವೆಂಬ ವಸ್ತು ಇಲ್ಲವೇ ಇಲ್ಲ ಎಂಬಂತೆ ನಡೆಯುವುದು.

"ಆತ್ಮ" ಎಂದರೆ ಏನು? ಲೋಕದಲ್ಲಿ ನಾವೆಲ್ಲ "ನಾನು, ನಾನು" ಎಂದು ವ್ಯವಹಾರ ಮಾಡುತ್ತೇವಷ್ಟೆ? ಈ "ನಾನು, ನಾನು" ಎನ್ನುವುದು ಜೀವ. ನಾವೆಲ್ಲ ಜೀವವಂತರು. ಆ ಜೀವದ ಒಳಗಡೆ ಗೂಢವಾಗಿರುವುದು ಶುದ್ಧ ಚೈತನ್ಯ. ಆ ಚೈತನ್ಯವೇ "ಆತ್ಮ". ಆ ಆತ್ಮ ಚೈತನ್ಯವೇ ನಮ್ಮ ದೇಹ ಇಂದ್ರಿಯ ಬುದ್ಧಿಗಳ ಮೂಲಕ ಕೆಲಸಮಾಡಿ ಜಗದ್ವ್ಯಾಪಾರ ನಡಸುವ ಮೂಲ ಶಕ್ತಿ.

(೪) ಆತ್ಮದ ಲಕ್ಷಣ

ಅಲುಗದದು ತಾನೇಕವದು ವೇಗಿ ಮನಕಿಂತ ।
ಸಿಲುಕದಿಂದ್ರಿಯಗಳ್ಗೆ ತಾಂ ಮೊದಲೆ ಸರಿದು ॥
ಕುಳಿತುಮ್ ಅದು ಮುನ್ನಿರ್ಪುದೋಡುವೆಲ್ಲರ್ಗೆ ತಾಂ ।
ಕೆಲಸಗೆಯ್ಸುವನೆಲ್ಲರಿಂ ಮರುತನದರಿಂ ॥ ೪ ॥

ಮರುತ್ತು ಎಂದರೆ ಪ್ರಾಣವಾಯು. ಸಮಸ್ತ ಜಂತುಗಳಲ್ಲಿಯೂ ಪ್ರಾಣಾದಿವಾಯುಗಳು ಸಂಚರಿಸಿ ಜೀವಗಳಿಗೆ ವ್ಯವಹಾರಶಕ್ತಿಯನ್ನು ಕೊಡುತ್ತವೆ. ಇದು ಆತ್ಮದ ಬಲದಿಂದ.

ಅಲುಗುವುದು, ಅಲುಗದದು, ಪರಮಾತ್ಮನೆನಿಸಿದುದು ।
ಬಲುದೂರಮಿರ್ಪುದದು, ನೆರೆ ಬಳಿಯೊಳಿಹುದು ॥
ಅಡಗಿರ್ಪುದದು ಸಕಲ ವಸ್ತು ಜಂತುಗಳೊಳಗಮ್ ।
ಎಡೆಬಿಡದೆ ಮುತ್ತಿಹುದದವನು ಹೊರಗೆಲ್ಲ ॥ ೫ ॥

ಮುತ್ತಿಹುದು+ಅದು+ ಅವನು (ಅವುಗಳನ್ನು).

(೫) ಸರ್ವಾತ್ಮಭಾವ

ಯಸ್ತು ಸರ್ವಾಣಿ ಭೂತಾನಿ ।
ಆತ್ಮನ್ಯೇಽವಾನುಪಶ್ಯತಿ ॥
ಸರ್ವಭೂತೇಷು ಚಾತ್ಮಾನಂ ।
ತತೋ ನ ವಿಜುಗುಪ್ಸತೇ ॥ ೬ ॥

ಆತ್ಮನಿ+ಏವ+ಅನುಪಶ್ಯತಿ. ನ ವಿಜುಗುಪ್ಸತೇ=ಜುಗುಪ್ಸೆ (ಬಿಡಬೇಕೆಂದು ಇಚ್ಛೆ) ಪಡುವುದಿಲ್ಲ.

ಯಸ್ಮಿನ್ ಸರ್ವಾಣಿ ಭೂತಾನಿ ।
ಆತ್ಮೈವಾಭೂದ್ವಿಜಾನತಃ ॥
ತತ್ರ ಕೋ ಮೋಹಃ ಕಃ ಶೋಕಃ ।
ಏಕತ್ವಮನುಪಶ್ಯತಃ ॥ ೭ ॥

ಆತ್ಮ+ಏವ+ಅಭೂತ್+(ಇತಿ)+ವಿಜಾನತಃ=ಆತ್ಮವೇ ಆಗಿದೆಯೆಂದು ತಿಳಿದವನ. ಏಕತ್ವಮ್=ಐಕ್ಯವನ್ನು.

### (೫) ಎಲ್ಲ ತನ್ನಲ್ಲಿ, ತಾನೆಲ್ಲರಲ್ಲಿ

ಪ್ರಾಣಿಲೋಕವನೆಲ್ಲ ತನ್ನಾತ್ಮದೊಳಗಾರು ।
ಕಾಣುವನೊ ತನ್ನಾತ್ಮವನೆ ಸರ್ವರೊಳಗಂ ॥
ಆನವವನಂ ದುಗುಡ ಬೇಸರಗಳೀ ಜಗದಿ ।
ತಾನಲ್ಲದೊಂದುಮಿಲ್ಲದಿರೆ ಪಗೆಯಾರಿಂ ? ॥೬॥

ಆನವು (ಹೊಂದವು)+ಅವನಂ. ಪಗೆ=ದ್ವೇಷ.
ತನ್ನ ಹೊರತು ಬೇರೆ ಯಾರೂ ಇಲ್ಲದಿರುವಾಗ ಶತ್ರು ಯಾರು ? ಅನಿಷ್ಟನು ಯಾರು ?

ನಿಖಿಲ ಭೂತಂಗಳುಂ ತನ್ನಾತ್ಮವೆಂದರಿತು ।
ಸಕಲೈಕ್ಯದೃಷ್ಟಿಯಿಂ ನಡೆಯುವಾತಂಗೆ ॥
ಸ್ವಕವಿದನ್ಯಕವದೆಂಬಾ ಭ್ರಮೆಯುದೆಂತಹುದು ।
ಸುಖಿಯುವಂ ಮೋಹಶೋಕಗಳಂಟುವವನಂ ॥೭॥

ಸ್ವಕ(ವು)=ಸ್ವಂತದ್ದು. ಅನ್ಯಕ(ವು)=ಇತರರದು.

## (೬) ಲೋಕವಿಧಾಯಕ

ಸ ಪರ್ಯಗಾಚ್ಛುಕ್ರಮಕಾಯಮವ್ರಣಂ |
ಅಸ್ನಾವಿರಗ್ಂ ಶುದ್ಧಮಪಾಪವಿದ್ಧಮ್ ||
ಕವಿರ್ಮನೀಷೀ ಪರಿಭೂಸ್ಸ್ವಯಂಭೂಃ |
ಯಾಥಾತಥ್ಯತೋಽರ್ಥಾನ್ ವ್ಯದಧಾತ್
ಶಾಶ್ವತೀಭ್ಯಃ ಸಮಾಭ್ಯಃ ||೮||

ಪರಿ+ಅಗಾತ್=ಸುತ್ತುಗಟ್ಟಿದ್ದಾನೆ. ಶುಕ್ರ=ಸ್ವಚ್ಛ, ಬೆಳಗುವ. ಅಕಾಯ=ದೇಹವಿಲ್ಲದ. ಅವ್ರಣ=ಹುಣ್ಣಿಲ್ಲದ. ಅಸ್ನಾವಿರ=ಸ್ನಾಯು (ನರತಂತು) ವಿಲ್ಲದ. ಅಪಾಪವಿದ್ಧಮ್=ಪಾಪದ ವೇಧೆಯಿಲ್ಲದ ಯಾಥಾತಥ್ಯ=ಹೇಗಿರಬೇಕೋ ಹಾಗಿರುವುದು. ಅರ್ಥಾನ್=ವಿಷಯಗಳನ್ನು. ವ್ಯದಧಾತ್=ವಿಧಾಯಕ ಮಾಡಿದನು. ಸಮಾಭ್ಯಃ=(ಅನಂತ) ಎಷ್ಟೋ ಸಂವತ್ಸರಗಳ ಕಾಲ, ಶಾಶ್ವತವಾಗಿ.

## (೬) ಕರ್ಮಫಲವಿಧಾತ

ಹರಡಿಹನ್ ಅದೆತ್ತಲುಂ, ಶುಭ್ರನವನ್, ಅಶರೀರಿ |
ಕುರು ಕುತ್ತವಿಲ್ಲದನು, ನಾಡಿಯಿಲ್ಲದನು ||
ನಿರ್ಮಲನು, ಪರಮೇಶನ್, ಅಘಹತಿಗೆ ಸಿಲುಕದನು |
ಮರ್ಮಾನುಭವಿಕ ಕವಿ, ಸದ್ವಿಚಾರಿ ಬುಧಂ ||
ಎಲ್ಲಕಂ ಮೇಲಿಹನು, ತಾನೆ ತಾನಾದವನು |
ಎಲ್ಲಕಾಲಮುಮೀ ಪ್ರಪಂಚವಿಷಯಂಗಳ್ ||
ಆವಾವುದೆಂತೆಂತು ನಡೆಯೆ ಜಗ ನಡೆಯುವುದೊ |
ಆ ವಿಧದೊಳದರದರ ನಿಜವ ರಚಿಸಿಹನು ||

ಈಶ್ವರನ ಚೈತನ್ಯ ಸಂಸ್ಫುರಣೆಯೇ ಪ್ರಕೃತಿ |
ಶಾಶ್ವತದಿ ಲೋಕತತಿ ಬೆಳೆವನುವೊಳವನು ||
ಪ್ರಕೃತಿಶಕ್ತಿಗಳಿಗವರವರ ಕಾರ್ಯವ ವಿಧಿಸಿ |
ಸ್ವಕೃತ ಫಲಭೋಗವಿರಿಸಿಹನು ಜೀವರ್ಗೆ || ೮ ||

ಬೆಳೆವ + ಅನುವೊಳ್ + ಅವನು.

## (೭) ಪ್ರವೃತ್ತಿ–ನಿವೃತ್ತಿ ಸಮನ್ವಯ

ಅನ್ಧಂ ತಮಃ ಪ್ರವಿಶನ್ತಿ
ಯೇಽವಿದ್ಯಾಮುಪಾಸತೇ ।
ತತೋ ಭೂಯ ಇವ ತೇ ತಮೋ
ಯ ಉ ವಿದ್ಯಾಯಾಗ್ಂ ರತಾಃ ॥೯॥

ಅಂಧ=ಕುರುಡು. ತಮಃ=ಕತ್ತಲೆ. ಭೂಯಃ=ಹೆಚ್ಚಾಗಿ.
ಅವಿದ್ಯಾ=ಕೇವಲ ಕರ್ಮಮಾರ್ಗ, ಸಂಸಾರದ ದಾರಿ. ವಿದ್ಯಾ=ಕೇವಲ ಜ್ಞಾನ ಮಾರ್ಗ, ಸಂನ್ಯಾಸದ ದಾರಿ. ತಾತ್ಪರ್ಯಸಂಗ್ರಹವನ್ನು ನೋಡಿರಿ, ಪುಟ ೨೭-೩೩.
ಇದೇ ವಾಕ್ಯವನ್ನು ಬೃಹದಾರಣ್ಯಕದಲ್ಲಿಯೂ (೪–೪–೧೦) ಕಾಣಬಹುದು.

ಅನ್ಯದೇವಾಹುರ್ವಿದ್ಯಯಾ
ಅನ್ಯದಾಹುರವಿದ್ಯಯಾ ।
ಇತಿ ಶುಶ್ರುಮ ಧೀರಾಣಾಂ
ಯೇ ನಸ್ತದ್ವಿಚಚಕ್ಷಿರೇ ॥೧೦॥

ಅನ್ಯತ್+ಏವ=ಬೇರೆಯೆಂದೇ. ಆಹುಃ=ಹೇಳಿದರು. ಶುಶ್ರುಮ=ಕೇಳುತ್ತೇವೆ. ಧೀರಾಣಾಂ=(ಧೀ) ಬುದ್ಧಿ ಸಮರ್ಥರ. ತತ್+ವಿಚಚಕ್ಷಿರೇ=ಅದನ್ನು ವಿವರಿಸಿದರು.

ವಿದ್ಯಾಂ ಚಾವಿದ್ಯಾಂ ಚ
ಯಸ್ತದ್ವೇದೋಭಯಗ್ಂ ಸಹ ।
ಅವಿದ್ಯಯಾ ಮೃತ್ಯುಂ ತೀರ್ತ್ವಾ
ವಿದ್ಯಯಾಽಮೃತಮಶ್ನುತೇ ॥೧೧॥

(೭) ಕರ್ಮಜ್ಞಾನ ಸಮುಚ್ಚಯ

ಕುರುಡು ಕತ್ತಲೆಯ ಪುಗುವರ್ ಬರಿಯ ಕರ್ಮಠರು ।
ಚರಿಸುತಲವಿದ್ಯೆಯೊಳ್ [ಜ್ಞಾನಮಂ ತೊರೆದು] ॥
ತೊರೆದು ಕರ್ಮವ, ವಿದ್ಯೆಯೊಂದೆ ತಮಗೆನ್ನುವರು ।
ನೆರೆಕುರುಡರ್ ಅಂತು [ವಿಜ್ಞಾನದ ಭ್ರಮೆಯಿಂ] ॥ ೯ ॥

ಬೇರೆ ಫಲ ವಿದ್ಯೆಗೆ, ನಿವೃತ್ತಿಧರ್ಮಕ್ಕೆ, ಮೇಣ್ ।
ಬೇರೆ ಫಲವಿಹುದವಿದ್ಯೆಗೆ, ಪ್ರವೃತ್ತತೆಗೆ ॥
ಧೀರರೀ ಯುಕ್ತಿಯಂ ಜ್ಞಾನ ಕರ್ಮಂಗಳ್ಗೆ ।
ಸಾರಿಪೇಳಿದರದನು ನಾವು ಕೇಳಿಹೆವು. ॥ ೧೦ ॥

ಅರಿತು ವಿದ್ಯೆಯ ಮೇಣ್ ಅವಿದ್ಯೆಯಾ ಪಥಯುಗವ ।
ಚರಿಸುವಂ ಜ್ಞಾನಕರ್ಮಗಳೆರಡನ್ ಅನುವಿಂ
ದುರಿತ ಮೃತ್ಯುಗಳ ಕರ್ಮದ ಪಾಕದಿಂ ಗೆಲಿದು ।
ಪರಮಾಮೃತವನಡರುವಂ ಜ್ಞಾನಬಲದಿಂ ॥ ೧೧ ॥

(೮) ಬ್ರಹ್ಮ ಜಗತ್ಸಂಬಂಧ

ಅನ್ಧಂ ತಮಃ ಪ್ರವಿಶನ್ತಿ
ಯೇಽಸಂಭೂತಿಮುಪಾಸತೇ ‖
ತತೋ ಭೂಯ ಇವ ತೇ ತಮೋ
ಯ ಉ ಸಂಭೂತ್ಯಾಗ್ಂ ರತಾಃ ‖ ೧೨ ‖

ಅಸಂಭೂತಿ=ಸ್ವತಂತ್ರವಾದ ಇರುವಿಕೆಯಿಲ್ಲದ, ನಿಜವಾದ ಅಸ್ತಿತ್ವವಿಲ್ಲದ, ಕಾಲವಶ ಪ್ರಪಂಚ. ಸಂಭೂತಿ=ಜಗತ್ತಿನ ಉತ್ಪತ್ತಿಕಾರಣವಾದ, ಮೂಲತತ್ತ್ವವಾದ, ಬ್ರಹ್ಮಸತ್ತ್ವ. ತಾತ್ಪರ್ಯಸಂಗ್ರಹವನ್ನು ನೋಡಿರಿ, ಪುಟ ೨೭-೩೩.

ಅನ್ಯದೇವಾಹುಃ ಸಂಭವಾತ್ ।
ಅನ್ಯದಾಹುರಸಂಭವಾತ್ ‖
ಇತಿ ಶುಶ್ರುಮ ಧೀರಾಣಾಂ ।
ಯೇ ನಸ್ತದ್ವಿಚಚಕ್ಷಿರೇ ‖ ೧೩ ‖

ಸಂಭೂತಿಂ ಚ ವಿನಾಶಂ ಚ ।
ಯಸ್ತದ್ವೇದೋಭಯಗ್ಂ ಸಹ ‖
ವಿನಾಶೇನ ಮೃತ್ಯುಂ ತೀರ್ತ್ವಾ ।
ಸಂಭೂತ್ಯಾಽಮೃತಮಶ್ನುತೇ ‖ ೧೪ ‖

### (೮) ಜಗನ್ಮೂಲಾಸ್ಥೆ-ಜಗಜ್ಜೀವನಾಸ್ಥೆ

ಕುರುಡು ಕತ್ತಲೆ ಗತಿ ಅಸಂಭೂತಿಭಜಕರಿಗೆ ।
(ನೆರಳವೊಲ್ ಸರಿಯುತಿಹ ಜಗವ ಪಿಡಿದರ್ಗೆ) ॥
ಪಿರಿಯದದಕಿಂತ ಕತ್ತಲೆಯೆ ಗತಿ ಸಂಭೂತಿ- ।
ಪರರಿ(ಗಾತ್ಮವನೆಳಸಿ ಜಗವ ಮರೆವರ್ಗೆ) ॥ ೧೨ ॥

ಬೇರೆ ಫಲ ಸಂಭವದೆ (ಮೂಲಾತ್ಮಭಜನೆಯಿಂ) ।
ಬೇರೆಯದಸಂಭವದೆ (ಲೋಕಸೇವನೆಯಿಂ) ॥
ಧೀರರ್ (ಈ ಯುಕ್ತಿಯಂ ಬ್ರಹ್ಮವಿಶ್ವಂಗಳ್ಗೆ) ।
ಸಾರಿಪೇಳಿಹರದನು ನಾವು ಕೇಳಿಹೆವು ॥ ೧೩ ॥

ಸ್ಮರಿಸಿ ಸಂಭವ ವಿನಾಶಗಳನೆರಡಂ ಕೂಡ- ।
ಲರಿಯಲಾತ್ಮಜಗತ್ತುಗಳ ಪರಸ್ಪರವ ॥
ದುರಿತ ಮೃತ್ಯುಗಳ ಮಾಯಾನಾಶದಿಂ ದಾಟಿ ।
ಪರಮಾಮೃತವ ಪಡೆವನಾತ್ಮದರ್ಶನದಿಂ ॥ ೧೪ ॥

## (೯) ಕಾಲಪ್ರತಿನಿಧಿ

ಹಿರಣ್ಮಯೇನ ಪಾತ್ರೇಣ ।
ಸತ್ಯಸ್ಯಾಪಿಹಿತಂ ಮುಖಂ ॥
ತತ್ತ್ವಂ ಪೂಷನ್ನಪಾವೃಣು ।
ಸತ್ಯಧರ್ಮಾಯ ದೃಷ್ಟಯೇ ॥ ೧೫ ॥

ಹಿರಣ್ಮಯ=ಚಿನ್ನದ. ಅಪಿಹಿತಂ=ಮುಚ್ಚಲ್ಪಟ್ಟಿದೆ. ಪೂಷನ್=ಪೋಷಕನಾದ ಸೂರ್ಯನೆ. ಅಪಾವೃಣು=ತೆಗೆದುಹಾಕು.

ತಾತ್ಪರ್ಯಸಂಗ್ರಹ ನೋಡಿರಿ, ಪುಟ ೩೩.

ಇಲ್ಲಿ "ಸತ್ಯಧರ್ಮಾಯ" ಪದದ ಅರ್ಥವನ್ನು ಗಮನವಿರಿಸಿ ನೋಡಬೇಕು. ಪ್ರಾರ್ಥನೆ ಮಾಡುವವನು ಎಂಥವನು? ಸತ್ಯಧರ್ಮನು—ಎಂದರೆ ಸತ್ಯವೇ ಸ್ವಭಾವ ಲಕ್ಷಣವಾಗಿರುವವನು. ಅವನು ಜಗಜ್ಜೀವನಗಳ ಪರಮಸತ್ಯವೇನೆಂಬುದನ್ನು ತಿಳಿಯಲಿಚ್ಛಿಸುವವನು. ಅವನಿಗೆ ಜಗತ್ತಿನ ಮೇಲ್ತೋರಿಕೆ ಸಾಲದು. ಅವನಿಗೆ ಬೇಕಾದದ್ದು ಆಳದ ಸತ್ಯಸ್ವರೂಪ.

ಸತ್ಯಜ್ಞಾನದಿಂದ ಧರ್ಮವಿವೇಕ. ಧರ್ಮವೆಂದರೆ ಮನುಷ್ಯಜೀವವು ಉತ್ತಮದಶೆಗೆ ಹತ್ತಲು ಸಾಧಕವಾದ ನೀತಿ. ಎಂಥ ನಡವಳಿಕೆಯಿಂದ ಉತ್ತಮಗತಿ ದೊರೆತೀತೋ ಅದು ಧರ್ಮ.

ಧರ್ಮಕ್ಕೆ ಸತ್ಯವೇ ಆಧಾರ. ಆದದ್ದರಿಂದ ಯಾರು ಶ್ರೇಯಸ್ಸಿನ ಮಾರ್ಗದಲ್ಲಿ ನಡೆಯಬೇಕೆಂದು ಮನಸ್ಸು ಮಾಡಿಕೊಂಡಿದ್ದಾನೋ ಅವನಿಗೆ ಮೊದಲು ಬೇಕಾದದ್ದು ಪರಮಸತ್ಯ—ಸತ್ಯದ ಸತ್ಯ. ಈ ಪರಮ ಸತ್ಯಕ್ಕೆ ಮುಖವಾಡದಂತೆ ಇದ್ದಾನೆ ಸೂರ್ಯದೇವರು.

ಪೂಷನ್ನೇಕರ್ಷೇ ಯಮ ಸೂರ್ಯ ।
ಪ್ರಾಜಾಪತ್ಯ ವ್ಯೂಹ ರಶ್ಮೀನ್ ಸಮೂಹ ॥
ತೇಜೋ ಯತ್ತೇ ರೂಪಂ ಕಲ್ಯಾಣತಮಂ ।
ತತ್ತೇ ಪಶ್ಯಾಮಿ ಯೋಽಸಾವಸೌ ಪುರುಷಃ ಸೋಽಹಮಸ್ಮಿ ॥ ೧೬ ॥

ಏಕರ್ಷೇ=ಒಬ್ಬೊಂಟಿಯಾಗಿ ಸಂಚರಿಸುವವನೇ. ಯಮ=ನಿಯಾಮಕ. ವ್ಯೂಹ=ಬೇರೆಮಾಡು. ಕಾಲಪ್ರತಿನಿಧಿ, ಸೃಷ್ಟಿಕರ್ತ, ಪೋಷಕ, ನಾಶಕಾರಕ, ಸರ್ವಾಂತರ್ಯಾಮಿ—ಇವೆಲ್ಲ ಸೂರ್ಯ. ಆ ಸೂರ್ಯನೊಳಗಣ ಚೈತನ್ಯವೂ ಮನುಷ್ಯನೊಳಗಣ ಚೈತನ್ಯವೂ ಒಂದೇ ಮಹಾ ಚೈತನ್ಯಸಮುದ್ರದ ಬೇರೆ ಬೇರೆ ಅಲೆಗಳು; ಸಮುದ್ರದಲ್ಲಿ ಅವೆಲ್ಲ ಒಂದೇ.

## (೯) ಸದ್ವಸ್ತುವಿನ ಸಾಕ್ಷಾತ್ ಪ್ರತಿನಿಧಿ

ಹೊನ್ನ ತಟ್ಟೆಯ ಕವಿದು, ಪೋಷಕನೆ, ಓ ಸೂರ್ಯ।
ನಿನ್ನೊಳಿಹ ಸತ್ಯದಾನನವ ಮರೆಯಿಸಿಹೆ ॥
ನನ್ನಿಯಿಂ ತೆಗೆ ಅದನು ; ಸತ್ಯದೊಳ್ ಮನವೆನಗೆ।
ಎನ್ನ ಕಣ್ಗದ ತೋರು ; ಧರ್ಮಬೀಜವದು ॥ ೧೫ ॥

ಸತ್ಯದ+ಆನನವ (ಮುಖವನ್ನು).

ಪರಬ್ರಹ್ಮವು ನಿರ್ಗುಣನಿರಾಕಾರವಸ್ತು. ಸಾಮಾನ್ಯಜನರು ಅದನ್ನು ಗ್ರಹಿಸಲಾರರು. ಅವರ ಸೌಲಭ್ಯಕ್ಕಾಗಿ ಪರಬ್ರಹ್ಮದ ಸಗುಣಸಾಕಾರರೂಪವಾಗಿ ಸರ್ವರಿಗೂ ಪ್ರತ್ಯಕ್ಷನಾಗಿರುವ ಸೂರ್ಯದೇವನನ್ನು ಇಲ್ಲಿ ಸ್ತೋತ್ರಮಾಡಿದೆ.

ಓ ಸೂರ್ಯ, ಏಕಚರ, ಓ ಪ್ರಜಾಪತಿಪುತ್ರ।
ಪೂಷ, ಯಮ, ಬಿಸಿಯ ಬಿಸುಟೊಡ್ಡು ಕಿರಣಗಳ ॥
ಲೇಸಿನಿಂ ನಿನ್ನಿಂಬುರೂಪವನು ಕಾಣುವೆನು।
ಭಾಸಿಪನ್ ಅದರೊಳಾರೊ ಆ ಪುರುಷ ನಾನು ॥ ೧೬ ॥

ಬಿಸಿಯ ಬಿಸುಟು+ಒಡ್ಡು ಕಿರಣಗಳ=ಕಾವನ್ನು ಕಳೆದು ನಿನ್ನ ಕಿರಣಗಳನ್ನು ಒಟ್ಟುಗೂಡಿಸು ("ವ್ಯೂಹ+ಸಮೂಹ").

ಸೂರ್ಯನ ಬಾಹ್ಯತೇಜಸ್ಸಿಗಿಂತ ಸೂರ್ಯಮಂಡಲ+ಅಂತರ್ವರ್ತಿಯಾದ ಪರಮಾತ್ಮಚೈತನ್ಯವು ಸೂಕ್ಷ್ಮತರ ಸತ್ಯವೆಂದೂ ಮತ್ತು ಅದು ಹೆಚ್ಚು ತಂಪುಳ್ಳದ್ದಾಗಿ ಹೆಚ್ಚು ಶಾಂತಿಪ್ರದವಾಗಬಲ್ಲದ್ದೆಂದೂ ಇದರ ಭಾವ.

## (೧೦) ಕೃತಾಕೃತಸ್ಮರಣೆ

ವಾಯುರನಿಲಮಮೃತಮಥೇದಮ್ ।
ಭಸ್ಮಾಂತಗ್ಂ ಶರೀರಮ್ ॥
ಓಂ ಕ್ರತೋ ಸ್ಮರ ಕೃತಗ್ಂ ಸ್ಮರ ।
ಕ್ರತೋ ಸ್ಮರ ಕೃತಗ್ಂ ಸ್ಮರ ॥ ೧೭ ॥

ಓಂ=ಪರಬ್ರಹ್ಮ ಸ್ಮರಣೆ. "ಅಂತಕಾಲೇಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್" —ಗೀತಾ ೮-೫.

(ಹೇ) ಕ್ರತೋ=[" ಸಂಕಲ್ಪಾತ್ಮಕ "—ಶಂಕರ.] ಓ ಮನಸ್ಸೇ. ಸ್ಮರ=ಸ್ಮರಿಸು

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ ।
ವಿಶ್ವಾನಿ ದೇವ ವಯುನಾನಿ ವಿದ್ವಾನ್ ॥
ಯುಯೋಧ್ಯಸ್ಮಜ್ಜುಹುರಾಣಮೇನಃ ।
ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥ ೧೮ ॥

ನಯ=ಕರೆದುಕೊಂಡು ಹೋಗು. ರಾಯೇ=ಸಂಪತ್ತಿಗಾಗಿ (" ಧನಾಯ, ಕರ್ಮಫಲಭೋಗಾಯ "—ಶಂಕರ). ವಯುನಾನಿ=(ಕರ್ಮಾಣಿ) ಪುಣ್ಯಪಾಪಗಳನ್ನು, ಯುಯೋಧಿ=ಬಿಡಿಸು, ನಾಶಪಡಿಸು (" ವಿನಾಶಯ "—ಶಂಕರ). ಜುಹುರಾಣಂ=ಕುಟಿಲವನ್ನು, ವಂಚನಾತ್ಮಕವಾದದ್ದನ್ನು. ಏನಃ=ಪಾಪವನ್ನು. ಭೂಯಿಷ್ಠಾಂ=ಬಹುವಾದ.

ವಯುನಾನಿ=" ಸರ್ವಾನ್ ಮಾರ್ಗಾನ್ " (ಸಾಯಣ, ತೈ. ಆ.); " ಮಾರ್ಗಾನ್ " (ಸಂಹಿತಾ, ೧-೧-೧೪).

ಓಂ ಶಾಂತಿಶ್ಶಾಂತಿಶ್ಶಾಂತಿಃ

## (೧೦) ಪುಣ್ಯಪಾಪವಿವೇಕವಿರಲಿ

ಕಾಯವಿದನ್ ಅಗ್ನಿಕೃಪೆ ಬೂದಿಮಾಳ್ಕೆನ್ನುಸಿರ |
ವಾಯುಂ ತಾಂ ವಿಶ್ವದಮೃತಾನಿಲದಿ ಬೆರೆಗೆ ||
ಓಮ್, ಎನ್ನ ಮನವೆ ನೆನೆ ನಿನ್ನ ಕರ್ಮಗಳ ನೆನೆ |
ಓ ಮನವೆ ನೆನೆ ನಿನ್ನ ಕರ್ಮಗಳನೆಲ್ಲ ||೧೭||

ಕಾಯವಿದನ್=ಈ ಕಾಯ (ದೇಹ)ವನ್ನು. ಅಮೃತಾನಿಲ=ಶಾಶ್ವತವಾಯು, ಪಂಚಮಹಾಭೂತಗಳಲ್ಲೊಂದು.

ಕರ್ಮಫಲವಿಧಿಯು ಅನಿವಾರ್ಯವೆಂಬುದು ಇಲ್ಲಿ ಸ್ಪಷ್ಟವಾಗಿ ಗೊತ್ತಾಗುತ್ತದೆ. ೨ ನೆಯ ಮಂತ್ರವನ್ನೂ ("ನ ಕರ್ಮ ಲಿಪ್ಯತೇ") ೮ ನೆಯದನ್ನೂ ("ಯಾಥಾತಥ್ಯತೋಽರ್ಥಾನ್ ವ್ಯದಧಾತ್") ೧೫ ನೆಯದನ್ನೂ ("ಸತ್ಯಧರ್ಮಾಯ") ಇಲ್ಲಿ ಸ್ಮರಿಸಿ ಮನನಕ್ಕೆ ತಂದುಕೊಳ್ಳಬೇಕು.

ಹಾಗೆಯೇ ಎರಡನೆಯ ಮಂತ್ರದ "ಜಿಜೀವಿಷೇತ್" ಎಂಬ ವಾಕ್ಯವನ್ನೂ ಇಲ್ಲಿ ಸ್ಮರಿಸಿಕೊಳ್ಳಬೇಕು. ಎಷ್ಟು ವರ್ಷ ಬದುಕಿದರೂ ಮುಗಿವು ಒಂದುಂಟು. ನೂರು ವರ್ಷದ ಮೇಲಾದರೂ, ಸಾವಿರ ಹತ್ತುಸಾವಿರ ವರ್ಷದ ಮೇಲಾದರೂ ಮೃತ್ಯು ತಪ್ಪಿದ್ದಲ್ಲ. ಹಾಗೆ ಅವಸಾನಕಾಲ ಬಂದಾಗ ಜೀವಿತಕಾಲದ ಕೃತ್ಯಾಕೃತ್ಯಗಳನ್ನು ಜ್ಞಾಪಕಕ್ಕೆ ತಂದುಕೊಂಡು ಪಾಪಕ್ಕಾಗಿ ಪಶ್ಚಾತ್ತಾಪವನ್ನೂ ಪುಣ್ಯಕ್ಕಾಗಿ ದೇವರಿಗೆ ವಂದನೆಯನ್ನೂ ಸಲ್ಲಿಸಬೇಕಾದದ್ದು. ಕಡೆಯ ಘಳಿಗೆಯ ಧ್ಯಾನವೇ ಮುಂದಿನ ಜನ್ಮಕ್ಕೆ ನಿರ್ಣಾಯಕ. "ಯಂ ಯಂ ವಾಪಿ ಸ್ಮರನ್ ಭಾವಂ . . ." (ಗೀತಾ, ೮–೬)

ಓ ಯಜ್ಞಪತಿ ನಡಸು ನಮ್ಮನೊಳ್ದಾರಿಯಲಿ |
ಆಯ ಭುಕ್ತಿಗೆ, ನಮ್ಮ ಕರ್ಮಚರಿತನು ನೀಂ ||
ಸಾಯಿಸೆಮ್ಮಯ ವಕ್ರ ಪಾಪಗಳನೆಲ್ಲವಂ |
ಶ್ರೇಯವಂ ತೋರು ನಮಿಪೆವು ಮರಳಿ ಮರಳಿ ||೧೮||

ಆಯ=ಬಂದದ್ದು, ಕರ್ಮಫಲವಾಗಿ ನಮ್ಮ ಪಾಲಿಗೆ ಬಂದದ್ದು. (ಅದರ) ಭುಕ್ತಿ=ಭೋಜನ, ಅನುಭೋಗ.

**ಓಂ ಶಾಂತಿ, ಶಾಂತಿ, ಶಾಂತಿ**

# ನಿವೇದನ—ಡಿ. ವಿ. ಜಿ.

ಕಲೆಯ ಸ್ವರೂಪವನ್ನು ಯೋಚಿಸಿದಾಗಲೆಲ್ಲ ನನಗೆ ಡಿ. ವಿ. ಜಿ. ಅವರ 'ನಿವೇದನ' ನೆನಪಾಗುವುದು. ಅಲ್ಲಿನ ಒಂದು ಪದ್ಯ "ಮನಕೆ ತೋರ್ಪ ಸೊಬಗನೆಲ್ಲ| ತನಗೆ ತುಷ್ಟಿಯಪ್ಪ ತೆರದಿ| ಜನಕೆ ನುಡಿಯಲರಿತ ಸುಕವಿ| ತಿಲಕನಾತನು| ಅನುವಿನಿಂದ ಬರೆವ ಕಲೆಯ ಕಲಿತನಾತನು"—ಕವಿ ಮತ್ತು ಕಾವ್ಯಲಕ್ಷಣವನ್ನು ತಿಳಿಸುತ್ತದೆ. ಹಾಗೆಯೇ ಎಲ್ಲ ಕಲೆಗಳ ಮೂಲಸ್ವರೂಪ ವನ್ನು ಸಾಧಾರಾಣ್ಯದಿಂದ ತಿಳಿಸುತ್ತದೆ. ಈವರೆಗೆ ನಾನು ಆಡಿರುವುದನ್ನೆಲ್ಲ . . . ಅಡಕವಾಗಿ ಸುಂದರವಾಗಿ ತಿಳಿಸುತ್ತದೆ.

—ವಿ. ಸೀ. (ಕವಿಕಾವ್ಯ ದೃಷ್ಟಿ)

ಕನ್ನಡಿಗನಾದ ಮಾತ್ರಕ್ಕೆ ಸ್ವಲ್ಪವೂ ಶ್ರಮವಿಲ್ಲದೆ ಕನ್ನಡಕಾವ್ಯದ ಸಾರ ವನ್ನು ಗ್ರಹಿಸಲಾರನು . . . ಲಘುಕಾವ್ಯವನ್ನು ಬೇಕಾದರೆ ಗ್ರಹಿಸಬಲ್ಲನು. ಆದರೆ 'ಬೇಲೂರಿನ ಶಿಲಾಬಾಲಿಕೆಯರು' ಎಂಬ ಕವನದ ಪ್ರತಿಭೆಯನ್ನು ಆಸ್ವಾದಿಸಲಾರನು. ಅದಕ್ಕೆ ತೀಕ್ಷ್ಣಮತಿಯೂ ತೀವ್ರಭಾವವೂ ಶ್ರೇಷ್ಠ ಕಲ್ಪನಾಶಕ್ತಿಯೂ ಆವಶ್ಯಕ.

—ಕುವೆಂಪು (ಸಾಹಿತ್ಯ ಪ್ರಚಾರ)

ಮೈಸೂರಿನ ಪ್ರೇಕ್ಷಣೀಯ ದೃಶ್ಯಗಳನ್ನು ಕುರಿತ ಒಂಭತ್ತು ಕವಿತೆ ಗಳೂ ಏಳು ಹಾಡುಗಳೂ, 'ಮುನ್ನುಡಿ' 'ನಿವೇದನ' ಎಂಬ ಕವಿತೆಗಳೂ, ಇಪ್ಪತ್ತೊಂದು ಚಿತ್ರಗಳೂ, ಟಿಪ್ಪಣಿಯೂ ಸಹ ಇದರಲ್ಲಿವೆ.

ಕ್ರೌನ್ ಅಷ್ಟಪತ್ರ ೬೧ ಪುಟಗಳು, ಬೆಲೆ: ರೂ. 1-75

---

# ವೃತ್ತ ಪತ್ರಿಕೆ

## ಅದರ ಚರಿತ್ರೆ, ಅದರ ಕರ್ತವ್ಯ, ಅದರ ಸ್ವಾತಂತ್ರ್ಯ—ಡಿ. ವಿ. ಜಿ.

ಶ್ರೀ ಡಿ. ವಿ. ಜಿ. ಅವರು ಪತ್ರಿಕಾವೃತ್ತಿಯನ್ನಾರಂಭಿಸಿ ಇಂದಿಗೆ ೬೦ ವರ್ಷಗಳ ಮೇಲಾಯಿತು. ಈ ದೀರ್ಘಾವಧಿಯ ಕಾಲದ ಜ್ಞಾನಾನುಭವಗಳ ಸಾರ, ಈ ಪುಸ್ತಕ. ವೃತ್ತ ಪತ್ರಿಕೆಯ ಪ್ರಪಂಚ ದಿನೇದಿನೇ ಬೆಳೆಯುತ್ತ, ಬದಲಾಯಿಸುತ್ತ ಹೋಗುತ್ತದೆ. ಆದರೂ ಇಂದಿನವುಟ್ಟಿಗೆ ಈ ಗ್ರಂಥ ಒಂದು ಸಂಕ್ಷೇಪಕ್ರಮದಲ್ಲಿ ಸಮಗ್ರವಾಗಿದೆ. ಪತ್ರಿಕಾಪ್ರಪಂಚದ ಯಾವೊಂದು ಮುಖ್ಯ ವಿಷಯವನ್ನೂ ಇಲ್ಲಿ ವಿವೇಚಿಸದೆ ಬಿಟ್ಟಿಲ್ಲ.

ಇದರಲ್ಲಿ, ಮೊದಲಲ್ಲಿ, ಪತ್ರಿಕೆ ಹುಟ್ಟಿ ಬೆಳೆದ ರೀತಿಯ ಚರಿತ್ರೆಯಿದೆ. ಅನಂತರ ಪತ್ರಿಕೆಗಳ ಕರ್ತವ್ಯ, ಪ್ರಭಾವ ಇತ್ಯಾದಿ ವಿಚಾರಗಳ ಸಮೀಕ್ಷೆಯಿದೆ. ಪತ್ರಿಕಾ ಸ್ವಾತಂತ್ರ್ಯದ ಸ್ವರೂಪ, ಆವಶ್ಯಕತೆ, ಪರಿಣಾಮ—ಇವುಗಳನ್ನು ಮೂರು ಅಧ್ಯಾಯಗಳ ಹರಹಿನಲ್ಲಿ ಅವಲೋಕಿಸಿದ್ದಾರೆ. "ಪತ್ರಿಕಾವೃತ್ತಿ ಆಗ—ಈಗ" ಎಂಬ ಅಧ್ಯಾಯ ಲೇಖಕರ ಅನುಭವಕರಂಡದ ಅನೇಕ ಸ್ವಾರಸ್ಯವಾದ ಸಂಗತಿಗಳಿಂದ ತುಂಬಿದೆ. 'ಪತ್ರಿಕೋದ್ಯೋಗಿಯ ಪ್ರತಿಜ್ಞೆ'; 'ವಿಚಾರವೇ ಪ್ರಚಾರವೇ?'; 'ಪತ್ರಿಕೆಯ ಚತುರಂಗ'; 'ಕಸಬು, ತಯಾರಿ'; 'ಪ್ರೆಸ್ ಕಮಿಷನ್'; 'ಪ್ರೆಸ್ ಕೌನ್ಸಿಲ್';—ಇವೇ ಮೊದಲಾದವು ಇತರ ಅಧ್ಯಾಯಗಳ ವಿಷಯವನ್ನು ವ್ಯಕ್ತಪಡಿಸುತ್ತವೆ. ಕೊನೆಯ ಅಧ್ಯಾಯಗಳಲ್ಲಿ ಲೇಖಕರ ದೃಷ್ಟಿಯಲ್ಲಿ ಆದರ್ಶಪತ್ರಿಕೆ ಹೇಗಿರಬೇಕೆಂಬ ವಿವರಣೆಯಿದೆ. ಪತ್ರಿಕೋದ್ಯೋಗಿಗಳು ಅವಶ್ಯವಾಗಿ ತಿಳಿದಿರಬೇಕಾದ ವೃತ್ತಿವಿಷಯಕವಾದ ಕಾನೂನುಗಳ ಪಟ್ಟಿಯನ್ನು ಅನುಬಂಧದಲ್ಲಿ ಕಾಣಬಹುದು. 'ಪತ್ರಿಕಾವೃತ್ತಿ ಮತ್ತು ಸಾಹಿತ್ಯ'ವೆಂಬ ಕೊನೆಯ ಅನುಬಂಧ ಈ ಲೇಖಕರಿಗೇ ವಿಶಿಷ್ಟವಾದ ವಿಚಾರಪರವಾದ ಧ್ಯೇಯೋದ್ದಿಷ್ಟದಿಂದ ಕೂಡಿದೆ.

ಡೆಮಿ ದ್ವಾದಶಪತ್ರ, ಪುಟಗಳು ೨೩೮ ; ೫ ಚಿತ್ರಗಳು,

ಬೆಲೆ : ಸಾದಾ ಪ್ರತಿ ರೂ. 6-00 ,  ಕ್ಯಾಲಿಕೊ ಪ್ರತಿ ರೂ. 8-25

---

# ಡಿ. ವಿ. ಜಿ. ಅವರ ಕೃತಿಗಳು

**ಕವಿತೆ**

ವಸಂತಕುಸುಮಾಂಜಲಿ
ನಿವೇದನ * ಉಮರನ ಒಸಗೆ
ಮಂಕುತಿಮ್ಮನ ಕಗ್ಗ * ಶ್ರೀರಾಮ ಪರೀಕ್ಷಣಂ
ಅನ್ತಃಪುರಗೀತೆ * ಗೀತ ಶಾಕುನ್ತಲ

**ನಾಟಕ**

ವಿದ್ಯಾರಣ್ಯ ವಿಜಯ
ಜಾಕ್ ಕೇಡ್ * ಮ್ಯಾಕ್‌ಬೆತ್

**ನಿಬಂಧ**

ಜೀವನ ಸೌಂದರ್ಯ ಮತ್ತು ಸಾಹಿತ್ಯ
ಸಾಹಿತ್ಯ ಶಕ್ತಿ * ಸಂಸ್ಕೃತಿ
ಬಾಳಿಗೊಂದು ನಂಬಿಕೆ

**ಜೀವನಚಿತ್ರ**

ದಿವಾನ್ ರಂಗಾಚಾರ್ಲು
ಗೋಪಾಲಕೃಷ್ಣ ಗೋಖಲೆ
ವಿದ್ಯಾರಣ್ಯರ ಸಮಕಾಲೀನರು
ಜ್ಞಾಪಕ ಚಿತ್ರಶಾಲೆ-
೧, ೨, ೩, ೪, ೫ ಮತ್ತು ೬

**ರಾಜಕೀಯ**

ರಾಜ್ಯಾಂಗ ತತ್ತ್ವಗಳು
ರಾಜಕೀಯ ಪ್ರಸಂಗಗಳು ೧-೨
ರಾಜ್ಯಶಾಸ್ತ್ರ * ವೃತ್ತಪತ್ರಿಕೆ

**ಧಾರ್ಮಿಕ**

ಈಶೋಪನಿಷತ್ತು * ಪುರುಷಸೂಕ್ತ
ಶ್ರೀಮದ್ಭಗವದ್ಗೀತಾ ತಾತ್ಪರ್ಯ

**ಮಕ್ಕಳಸಾಹಿತ್ಯ**

ಇಂದ್ರವಜ್ರ * ಬೆಕ್ಕೋಜಿ

---

ಕಾವ್ಯಾಲಯ ಪ್ರಕಾಶಕರು : ಜಯನಗರ : ಮೈಸೂರು—೨
ಕರ್ಣಾಟಕ ಪ್ರಕಟನಾಲಯ ★ ಕೋಟೆ ★ ಬೆಂಗಳೂರು

ಉಪನಿಷದಾಚಾರ್ಯರು ಶೈವರನ್ನು ಮಾತ್ರ, ಅಥವಾ ವೈಷ್ಣವರನ್ನು ಮಾತ್ರ, ಅಥವಾ ಶಾಕ್ತೇಯರನ್ನು ಮಾತ್ರ ಉದ್ದೇಶಿಸಿದ್ದವರಲ್ಲ . . . ಅವರ ಲಕ್ಷ್ಯದಲ್ಲಿದ್ದವನು ಸಕಲ ಪ್ರಪಂಚಸಾಮಾನ್ಯನಾದ ಮಾನವನು—ಸಾರ್ವತ್ರಿಕ ಮಾನವನು. ಅವನು ಯಾವುದಾದರೊಂದು ಮತವನ್ನಿಟ್ಟುಕೊಂಡವನಾಗಿರಬಹುದು ; ಯಾವ ಮತ ನಿಷ್ಕರ್ಷೆಯೂ ಇಲ್ಲದವನಾಗಿದ್ದರೂ ಇರಬಹುದು. ಅವನಿಗೂ ಉಪಕಾರವಾಗಬಲ್ಲದ್ದು ಈ ಉಪನಿಷತ್ತು. ಅವನು ಜಗದ್ರಹಸ್ಯ ಕುತೂಹಲಿಯಾಗಿದ್ದಲ್ಲಿ ಅವನಿಗೂ ಇದರಲ್ಲಿ ಸಮಾಧಾನ ದೊರೆಯಬೇಕು. ಹಾಗೆ ವಿಶ್ವಸಾಮಾನ್ಯ ಮಾನವನಿಗೆ ಮಾರ್ಗದೀಪಕವಾಗಬಲ್ಲದ್ದೆಂಬುದೇ ಈ ಉಪನಿಷತ್ತಿಗಿರುವ ದೊಡ್ಡ ಬೆಲೆ . . .

. . . ಅದರ ಮುಖ್ಯಾಂಶವು ಸಕಲ ಜನಾನ್ವೇಯವಾದ ಜಗಜ್ಜೀವತತ್ತ್ವ.